ಪ್ರಚಾರ ಪುಸ್ತಕ ಮಾಲೆ

248

# ಅಗ್ಗಳದೇವ

ಎಸ್. ಎನ್. ಕೃಷ್ಣಜೋಯಿಸ್



ಪ್ರಚಾರ ಪುಸ್ತಕಮಾಲೆ—೨೪೮

# ಅಗ್ಗಳದೇವ

ಎಸ್. ಎನ್. ಕೃಷ್ಣಜೋಯಿಸ್




೧೯೮೭

## ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾ ನಿಲಯದ ವಿದ್ಯೆ, ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ, ಸಮಷ್ಟಿ ಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ, ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸ ಗಳನ್ನು ಏರ್ಪಡಿಸಿ, ಸಂಸ್ಕೃತಿಯ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷ ಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲೆಸಿ, ಸಾಮಾನ್ಯ ಜನರಂತೆಯೇ ಇದ್ದು

ಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯ ದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸ ಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲ ದವರಿಗೆ ವಿಶ್ವವಿದ್ಯಾನಿಲಯ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ. ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ, ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆ ಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾ ನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ಅವರ ದುಃಖಕ್ಕೆ ಮೂಲ ಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆಯು ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಿಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು ಓದಿ ತಿಳುವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ

ಮುಂತಾದ ವಿಷಯಗಳನ್ನು ಕುರಿತ ಇನ್ನೂರ ನಲವತ್ತೇಳು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗಿದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಎಸ್. ಎನ್. ಕೃಷ್ಣ ಜೋಯಿಸ್ ಅವರ 'ಅಗ್ಗಳದೇವ' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ವೈ. ಪಿ. ರುದ್ರಪ್ಪ
ಕುಲಪತಿಗಳು

# ಕನ್ನಡ ಸಾಹಿತ್ಯದಲ್ಲಿ ಅಗ್ಗಳದೇವನ ಸ್ಥಾನ

ಕನ್ನಡ ಸಾಹಿತ್ಯದ ಭವ್ಯ ಪರಂಪರೆಯಲ್ಲಿ, ಹೆಚ್ಚು ಪ್ರಸಿದ್ಧವಾಗಿ ಮೊಟ್ಟಮೊದಲಿನಲ್ಲಿ ನಮಗೆ ಕಂಡುಬರುವುದು ಪಂಪ, ರನ್ನ ಮೊದಲಾದ ಜೈನ ಕವಿಗಳು ರಚಿಸಿರುವ ಹಳಗನ್ನಡ ಕಾವ್ಯಗಳು. ಕನ್ನಡ ನಾಡಿನಲ್ಲಿ ಇತರ ಮತ ಧರ್ಮಗಳ ಒತ್ತಡ ದಿಂದ ಜೈನಧರ್ಮವು ಖಿಲವಾಗಲು ಪ್ರಾರಂಭವಾದ ಕಾಲದಲ್ಲಿ ಸಾಮಾನ್ಯ ಜನರಿಗೂ ಜಿನಧರ್ಮತತ್ವಜ್ಞಾನ ಬೋಧನೆಯುಂಟಾ ಗುವಂತೆ ಜೈನಕವಿಗಳು ಕನ್ನಡ ಭಾಷೆಯಲ್ಲಿ ಕಾವ್ಯಗಳನ್ನು ರಚಿಸಿ ಹಳಗನ್ನಡದ ಅಸ್ತಿತ್ವ ಮತ್ತು ಬೆಳವಣಿಗೆಗೆ ಕಾರಣರಾಗಿದ್ದಾರೆ.

ಜೈನ ಕವಿಗಳು ರಚಿಸಿರುವ ಕನ್ನಡ ಗ್ರಂಥಗಳನ್ನು ನಾವು ಎರಡು ಪಂಗಡಗಳನ್ನಾಗಿ ವಿಭಾಗಿಸಬಹುದು. ಮೊದಲನೆಯದು ಕಾವ್ಯಗ್ರಂಥಗಳು. ಎರಡನೆಯದು ಜೈನಧರ್ಮದ ತತ್ವಗಳನ್ನು ಬೋಧಿಸುವ ವೈದಿಕ ಮತ್ತು ಲೌಕಿಕ ಶಾಸ್ತ್ರಗಳಿಗೆ ಸಂಬಂಧಪಟ್ಟ ಗ್ರಂಥಗಳು. ಈ ಎರಡರಲ್ಲಿ ಮೊದಲನೆಯದಾದ ಕಾವ್ಯ ಪರಂಪರೆಯೂ ಎರಡು ವಿಭಾಗಗಳಿಂದ ಕೂಡಿದೆ. ಪ್ರಸಿದ್ಧವಾದ ರಾಮಾಯಣ, ಭಾರತದ ಕಥೆ, ರಾಜರ ಕಥೆ ಇವನ್ನು ಆಧರಿಸಿ ರಚಿತವಾಗಿರುವ ಕಾವ್ಯಗಳು ಒಂದು ವಿಭಾಗ. ಜಿನಾಚಾರ್ಯರಾದ ತೀರ್ಥಂಕರರ ಚರಿತ್ರೆಯನ್ನು ಆಧರಿಸಿ ರಚಿತವಾಗಿರುವ ಕಾವ್ಯಗಳು ಮತ್ತೊಂದು ವಿಭಾಗ.

ತಮಗೆ ಅಭೀಷ್ಟರಾದ ತೀರ್ಥಂಕರರ ಚರಿತ್ರೆಯನ್ನು ಕಾವ್ಯ ರೂಪದಲ್ಲಿ ಬರೆಯುವುದು, ಜೈನ ಕವಿಗಳಲ್ಲಿ ಬೆಳೆದು ಬಂದಿರುವ ಒಂದು ಸಂಪ್ರದಾಯ. ಈ ಕಾವ್ಯಗಳಿಗೆ ಆಯಾ ತೀರ್ಥಂಕರರ ಹೆಸರಿನ ಪುರಾಣವೆಂದು ಅವರು ಅಂಕಿತ ಮಾಡಿರುತ್ತಾರೆ.

ಹಳಗನ್ನಡ ಸಾಹಿತ್ಯದಲ್ಲಿ ಈ ಜೈನಪುರಾಣರೂಪ ಕಾವ್ಯಗಳು ಅನೇಕ ಇವೆ.

ಈ ಪುರಾಣಕಾವ್ಯಗಳು ಹೆಚ್ಚಾಗಿ ಕಂಡುಬರುವುದು ಚಂಪೂ ಪ್ರಭೇದದಲ್ಲಿ. ಇದರಲ್ಲಿ ಅಷ್ಟಾದಶ ವರ್ಣನೆಗಳೂ, ಉಪಮಾ, ಉತ್ಪ್ರೇಕ್ಷೆ, ಸ್ವಭಾವೋಕ್ತಿ ಮೊದಲಾದ ಅಲಂಕಾರಗಳೂ, ಶೃಂಗಾರ, ವೀರ, ಶಾಂತ ಮೊದಲಾದ ನವರಸಗಳೂ ವರ್ಣಿತವಾಗಿರುತ್ತವೆ. ಮಧ್ಯದಲ್ಲಿ ಜೈನಮತಕ್ಕೆ ಸಂಬಂಧಪಟ್ಟ ಧರ್ಮತತ್ವಗಳನ್ನು ಕವಿಗಳು ಸಮಯಂವರಿತು ಅಳವಡಿಸಿರುತ್ತಾರೆ. ಕವಿಗೆ ಅಭೀಷ್ಟವಾದ [1]ತೀರ್ಥಂಕರನ ಚರಿತ್ರೆ ಕಥಾವಸ್ತುವಾಗಿರುತ್ತದೆ. ಈ ವಿಧವಾದ ಜೈನಪುರಾಣ ಕಾವ್ಯಗಳನ್ನು ರಚಿಸಿರುವ ಕವಿಗಳ ಗುಂಪಿಗೆ ಸೇರಿದವರಲ್ಲಿ ಅಗ್ಗಳದೇವನೂ ಒಬ್ಬ.

## ಕವಿಯ ವಂಶ ಮತ್ತು ಗುರು

ಅಗ್ಗಳದೇವನು ರಚಿಸಿರುವ ಚಂದ್ರಪ್ರಭ ಪುರಾಣದ ಮೊದಲನೆಯ ಆಶ್ವಾಸದಲ್ಲಿ

ಗುಣಿ ಮೂಲಸಂಘ ದೇಶೀ
ಗಣ ಪುಸ್ತಕಗಚ್ಛ ಕೊಂಡಕುಂದಾನ್ವಯದೊಳ್
ಗಣನೆವಡೆದೆಸೆವ ವಿನಯಾ
ಗ್ರಣಿ ವಿಮಲತರ ಸ್ವಭಾವನಗ್ಗಳದೇವಂ ೧-೫೩

---

1. ೨೪ ತೀರ್ಥಂಕರರು, ೧೨ ಚಕ್ರವರ್ತಿಗಳು, ೯ ಬಲಭದ್ರರು, ೯ ನಾರಾಯಣರು, ೯ ಪ್ರತಿನಾರಾಯಣರು ಈ ಐದು ವರ್ಗಗಳಿಂದ ಕೂಡಿದ್ದು ೬೩ ಮಂದಿಗಳ ವಿಷಯಕವಾದ ಚರಿತ್ರೆಗಳಿಂದ ಕೂಡಿದ ಕೃತಿ ಜೈನ ಪುರಾಣವೆನಿಸಿಕೊಳ್ಳುತ್ತದೆ. ಸಾಮಾನ್ಯವಾಗಿ ಜೈನ ಪುರಾಣಗಳು ತೀರ್ಥಂಕರರ ಹೆಸರಿನಿಂದ ಅಂಕಿತವಾಗಿರುತ್ತವೆ.

ಶಾಂತೀಶ ನಂದನಂಗುಪ
ಶಾಂತತೆ ವಾಚಾಂಬಿಕಾ ತನೂಜಂಗೆ ಜಗ
ತ್ಕಾಂತ ವಚಶ್ಚತುರತೆಯೆಂ
ದಿಂತಿವು ಭಾವಿಸುವೊಡಗ್ಗಳಂಗೆ ನಿಸರ್ಗಂ ೧-೩೪

ಎಂದು ತಿಳಿಸಿರುವಂತೆ ಈ ಕವಿ ಮೂಲಸಂಘ ದೇಶೀಗಣ ಪುಸ್ತಕಗಚ್ಛ ಕೊಂಡಕುಂದಾನ್ವಯದ ಶಾಂತೀಶನ ಮಗ. ಈತನ ತಾಯಿ ವಾಚಾಂಬಿಕಾ. ತಂದೆಯಿಂದ ಉಪಶಾಂತತೆ, ತಾಯಿಯಿಂದ ವಚಶ್ಚತುರತೆ, ಈ ಕವಿಗೆ ನಿಸರ್ಗವಾಗಿಯೇ ಮೂಡಿಬಂದ ಗುಣಗಳಾಗಿವೆ. 'ಉಭಯ ಕುಲ ಶುದ್ಧತಾಯುಂತ, ವಿನಯಾ ಗ್ರಣಿ, ವಿಮಲತರ ಸ್ವಭಾವಯುಕ್ತ' ಎಂದು ತನ್ನನ್ನು ವಿಶೇಷಿಸಿ ಕೊಂಡಿದ್ದಾನೆ ಈ ಕವಿ.

ಇದೇ ಕಾವ್ಯದ ಮೊದಲನೆಯ ಆಶ್ವಾಸ ೩೨ನೆಯ ಪದ್ಯ ದಲ್ಲಿ ಕಂಡುಬರುವಂತೆ, 'ತ್ರೈವಿದ್ಯ ಚಕ್ರವರ್ತಿಯಾದ ಶ್ರುತಕೀರ್ತಿ ದೇವ ಮುನಿಯು' ಈತನ ಗುರು. ಆಶ್ವಾಸಾಂತ್ಯದಲ್ಲಿರುವ 'ಶ್ರುತ ಕೀರ್ತಿ ತ್ರೈವಿದ್ಯ ಚಕ್ರವರ್ತಿ ಪದಪದ್ಮ ನಿಧಾನ ದೀಪವರ್ತಿ' ಎಂಬ ಉಲ್ಲೇಖ :

'ಶ್ರುತಕೀರ್ತಿ ದೇವನತ್ಯೂ
ರ್ಜಿತ ಕೀರ್ತಿಕನಾತ್ಮ ಶಿಷ್ಯನಿಂದಗ್ಗಳನಿಂ
ದತಿಶಯದ ಕಾವ್ಯಮಾರ್ಗದೆ
ನುತ ಚಂದ್ರಪ್ರಭ ಪುರಾಣಮಂ ಪೇಟಿಸಿದಂ'

ಎಂಬ ಬಿಳಗಿಯ ಶಾಸನದ ಉಲ್ಲೇಖ– ಈ ಎರಡು ಪ್ರಮಾಣ ಗಳೂ ಈ ಅಂಶವನ್ನು ದೃಢೀಕರಿಸುತ್ತವೆ.

**ದೇಶ–ಕಾಲ–ಮತ**

ಅಗ್ಗಳದೇವನ ವಿಚಾರವನ್ನು ತಿಳಿಯಲು ಆತನಿಂದ

ರಚಿತವಾಗಿರುವ ಚಂದ್ರಪ್ರಭ ಪುರಾಣವೇ ಮುಖ್ಯವಾದ ದ್ದಾಗಿದೆ. ಕವಿಯು ತನ್ನ ಊರು ಯಾವುದೆಂಬುದನ್ನು ಸ್ಪಷ್ಟವಾಗಿ ಎಲ್ಲಿಯೂ ತನ್ನ ಗ್ರಂಥದಲ್ಲಿ ಉಲ್ಲೇಖಿಸಿರುವುದಿಲ್ಲ. ಈ ಕಾವ್ಯದ ಒಂದನೆಯ ಆಶ್ವಾಸದ ೫೨ನೆಯ ಪದ್ಯದಲ್ಲಿ 'ಸುರ ರಾಜಾರ್ಜಿತ ನಿಂಗಳೇಶ್ವರಪುರ ಶ್ರೀತೀರ್ಥ ಚಂದ್ರಪ್ರಭಂ ಪರ ಮೇಶಂ' ಎಂದು ಹೇಳಿರುವುದರಿಂದ ಇಂಗಳೇಶ್ವರಪುರ ಈತನ ವಾಸಸ್ಥಳವಾಗಿರ ಬಹುದು. ಈ ಹೆಸರಿನ ಊರು ಉತ್ತರ ಕರ್ಣಾಟಕದ ಬಿಜಾಪುರ ಜಿಲ್ಲೆಯಲ್ಲಿದೆ.

ಅಗ್ಗಳದೇವನ ಕಾಲದ ಬಗ್ಗೆ ನಾವು ತಿಣಿಕಾಡಬೇಕಾಗಿಲ್ಲ. ರತ್ನತ್ರಯರೆಂದು ಪ್ರಸಿದ್ಧರಾಗಿರುವ ಪಂಪ ಪೊನ್ನ ರನ್ನರನ್ನು ತನ್ನ ಕಾವ್ಯಾರಂಭದಲ್ಲಿ ಸ್ತುತಿಸಿರುವುದರಿಂದ ಮತ್ತು ಕ್ರಿ.ಶ. ಸು. ೧೧೯೫ ರಲ್ಲಿದ್ದ ಆಚಣ್ಣಕವಿಯು ಈತನನ್ನು ಹೊಗಳಿರುವುದರಿಂದ, ಕ್ರಿ.ಶ. ೧೦೦೫ ರ ಮೇಲೆ ಮತ್ತು ಕ್ರಿ.ಶ. ೧೧೯೫ರ ಒಳಗೆ ಈ ಕವಿ ಇದ್ದನೆಂಬುದು ಸ್ಪಷ್ಟಪಡುತ್ತದೆ. ಅಗ್ಗಳದೇವನೇ ಚಂದ್ರಪ್ರಭ ಪುರಾಣವನ್ನು

'ಏಕಾದಶ ಶತಮುಂ ಮು
ತ್ತೇಕಾದಶಮಾಗೆ ಶಕನೃಪಾಬ್ದಂ ಸೌಮ್ಯ
ಪ್ರಾಕಟವರ್ಷದ ಚೈತ್ರಸಿ
ತೈಕಾದಶಿಯಂದು ನೆಗಟ್ದುದೀ ಕೃತಿರತ್ನಂ' ೧೬-೮೭

ಎಂಬ ಪದ್ಯದಲ್ಲಿ ಶಕ ೧೧೧೧ನೆಯ ಸೌಮ್ಯ ಸಂವತ್ಸರದ ಚೈತ್ರ ಶುದ್ಧ ಏಕಾದಶೀ ಎಂದರೆ ಕ್ರಿ.ಶ. ೧೧೮೯ ನೇ ಮಾರ್ಚಿ ಮಾಹೆ ೩೦ ನೆಯ ತಾರೀಕು ಗುರುವಾರ ರಚಿಸಿ ಮುಗಿಸಿರುವಂತೆ ಆ ಕಾವ್ಯದ ಕೊನೆಯಲ್ಲಿ ತಿಳಿಸಿರುವುದರಿಂದ ಈ ಕವಿ ಕ್ರಿ.ಶ. ೧೧೮೯ ರಲ್ಲಿ ಇದ್ದನೆಂಬುದು ಸ್ಪಷ್ಟಪಡುತ್ತದೆ. ಕಾವ್ಯರಚನೆಯ ಆರಂಭ

ಕಾಲವಾಗಲೀ ಇದರ ರಚನೆಗೆ ಎಷ್ಟು ಕಾಲ ತೆಗೆದುಕೊಂಡನೆಂಬು ದಾಗಲೀ ನಮಗೆ ತಿಳಿದುಬರುವುದಿಲ್ಲ. ಸಾಮಾನ್ಯವಾಗಿ ಧಾರ್ಮಿಕ ಶ್ರದ್ಧೆ ಮೂಡಬೇಕಾದರೆ ಐವತ್ತು ವರ್ಷಗಳ ಮೇಲ್ಪಟ್ಟು, ಎಂದು ಭಾವಿಸಿ ಕ್ರಿ.ಶ. ೧೧೬೦ ರ ಸುಮಾರಿನಲ್ಲಿ ಈ ಕವಿ ಇದ್ದಿರಬಹು ದೆಂದು ಪೂರ್ವಾವಧಿಯು ಕಾಲ ನಿರ್ಣಯಕ್ಕೆ ನಿಷ್ಕೃಷ್ಟ ಪ್ರಮಾಣ ದೊರೆಯುವವರೆಗೆ ನಾವು ಭಾವಿಸಬಹುದು.

ಈತನು ಜೈನಮತ ಸಂಪ್ರದಾಯದವನು ಎಂಬ ವಿಚಾರ ದಲ್ಲಿ ಯಾವ ವಿವಾದಕ್ಕೂ ಆಸ್ಪದವಿಲ್ಲ. ಈತನ ಕಾವ್ಯವೇ ಈ ಅಂಶವನ್ನು ಸ್ಥಿರೀಕರಿಸುತ್ತದೆ.

## ಆಶ್ರಯ

ಈ ಕವಿಗೆ ಯಾವ ರಾಜನ ಆಶ್ರಯವೂ ಇದ್ದಂತೆ ತಿಳಿದು ಬರುವುದಿಲ್ಲ. ರಾಜಾಶ್ರಿತ ಕವಿಯೇ ಆಗಿದ್ದಿದ್ದರೆ ತನಗೆ ಆಶ್ರಯ ನೀಡಿದ ರಾಜನನ್ನು ಗ್ರಂಥದಲ್ಲಿ ಸ್ತುತಿಸದೇ ಇರುತ್ತಿರಲಿಲ್ಲ.

"........ಲೋಕದೊಳಗೆ ವರ್ತಿಪ ವಿಲಸ
ತ್ಕಳೆಗಳೆನಿತನಿತಱೊಳಮ
ಗ್ಗಳಗಣ್ಣಂ ತೋರ್ಪನಗ್ಗಳಂ ನೃಪಸಭೆಯೊಳ್ ೧-೫೭

[ರಾಜನ ಸಭೆಯಲ್ಲಿ ಎಲ್ಲ ಕಲೆಗಳಲ್ಲೂ ಪಾಂಡಿತ್ಯೋತ್ಕರ್ಷ ವನ್ನು ಅಗ್ಗಳ ತೋರಿಸಬಲ್ಲ] ಎಂಬ ವಿಪಶ್ಚಿದ್ವೃಂದದ ಅಭಿಪ್ರಾಯವನ್ನು ಸೂಚಿಸುವ ಈ ಪದ್ಯದಲ್ಲಿ ನೃಪಸಭೆಯೊಳ್ ಎಂಬ ಪದವಿರುವ ಮಾತ್ರದಿಂದ ಈತನು ರಾಜನ ಆಸ್ಥಾನದಲ್ಲಿ ಕವಿಯಾಗಿದ್ದನೆಂದು ಹೇಳಲಾಗುವುದಿಲ್ಲ. ಹಿಂದಿನ ಕಾಲದಲ್ಲಿ ರಾಜಾಶ್ರಯವಿಲ್ಲದೆ ಕವಿ ಖ್ಯಾತಿ ಪಡೆದಿರುವುದು ಬಹಳ ವಿರಳ. ಅಲ್ಲದೆ ಆಶ್ರಿತ ರಾಜನ ಪ್ರಚೋದನೆಯಿಂದಲೇ ಅವರು ಕಾವ್ಯ

ಗಳನ್ನು ರಚಿಸಿರುವಂತೆ ಕಾವ್ಯಗಳ ಅವಲೋಕನದಿಂದ ಸ್ಪಷ್ಟ ಪಡುತ್ತದೆ. ರಾಜಾಶ್ರಯವಿಲ್ಲದಿದ್ದರೂ ಕಾವ್ಯರಚನಾ–ಪ್ರಚೋದನೆ ಈ ಕವಿಗೂ ಹೊರತೇನಲ್ಲ. ಗುರುವಾದ ಶ್ರುತಕೀರ್ತಿದೇವನ ಆದೇಶ ಮತ್ತು ವಿಪಶ್ಚಿದ್ವೃಂದದ ಅನುಜ್ಞೆಯಿಂದ ಈ ಕವಿ ಕಾವ್ಯವನ್ನು ರಚಿಸಿರುವುದರಿಂದ ಇವರೇ ಪ್ರಚೋದಕರು.

## ರಚಿಸಿರುವ ಕಾವ್ಯಗಳು

ಅಗ್ಗಳದೇವನು ಯಾವ ಯಾವ ಕೃತಿಗಳನ್ನು ರಚಿಸಿರುವ ನೆಂಬ ವಿಚಾರ, ಈಗ ಉಪಲಬ್ಧವಿರುವ ಚಂದ್ರಪ್ರಭ ಪುರಾಣ ದಿಂದ ತಿಳಿದುಬರುವುದಿಲ್ಲ. ಇದೇ ಕಾವ್ಯದ ಆ ೧–ಪ ೫೪ರಲ್ಲಿ 'ಭಾವಂ ಭಾವುಕ ಭವ್ಯಂ **ಕಾವ್ಯತತಿ**ಯೊಳಗ್ಗಳನಿನ್ನಾ' ಎಂದು ಹೇಳಿರುವುದರಿಂದ, ಈತನು ರಚಿಸಿರುವ ಇತರ ಕಾವ್ಯಗಳೂ ಇರಬಹುದೆಂಬ ಸಂಶಯಕ್ಕೆ ಆಸ್ಪದವಾಗಿದೆ. ಆದರೆ ಚಂದ್ರಪ್ರಭ ಪುರಾಣವನ್ನು ಬಿಟ್ಟು ಅಗ್ಗಳನಿಂದ ರಚಿತವಾದ ಮತ್ತಾವ ಕಾವ್ಯವೂ ಈವರೆಗೂ ನಮಗೆ ದೊರೆತಿಲ್ಲ.

ಪಾರ್ಶ್ವ ಕವಿಯು ಪಾರ್ಶ್ವನಾಥ ಪುರಾಣದ ಆ ೧ ಪ ೬೨ ರಲ್ಲಿ ತಿಳಿಸಿರುವಂತೆ, 'ರೂಪಸ್ತವನ ಮಣಿಪ್ರವಾಳ' ಮತ್ತು 'ಜಿನಾಸ್ಥಾನ ಸ್ತವನ' ಎಂಬ ಎರಡು ಸ್ತವನರೂಪ ಕವಿತೆಗಳು ಅಗ್ಗಳದೇವ ಕರ್ತೃಕವೆಂದು ತಿಳಿದುಬರುತ್ತದೆ. ಈ ಸ್ತವನಗಳೂ ದೊರೆಯುತ್ತಿಲ್ಲ.

## ಅಗ್ಗಳದೇವನಿಂದ ಪ್ರಭಾವಿತ ಮತ್ತು ಆತನ ಪದ್ಯ ಗಳನ್ನು ಉದ್ಧರಿಸಿರುವ ಕವಿಗಳು

ಈ ಕವಿಗೆ ಅನಂತರದ ಕವಿಗಳಾದ ಆಚಣ್ಣ [ಕ್ರಿ.ಶ.೧೧೯೫], ದೇವಕವಿ [ಕ್ರಿ.ಶ. ೧೨೦೦] ಪಾರ್ಶ್ವ [ಕ್ರಿ.ಶ. ೧೨೦೫], ಆಂಡಯ್ಯ

[ಕ್ರಿ.ಶ.೧೨೩೫], ಕಮಲಭವ [ಕ್ರಿ.ಶ. ೧೨೩೫], ಬಾಹುಬಲಿ [ಕ್ರಿ.ಶ. ೧೬೦೦] ಮೊದಲಾದವರು ತಮ್ಮ ಕಾವ್ಯಗಳ ಆದಿಯಲ್ಲಿ ಅಗ್ಗಳನನ್ನು ಸ್ತುತಿಸಿರುತ್ತಾರೆ. 'ಬ್ರಹ್ಮಶಿವ'ನೂ ತನ್ನನ್ನು 'ಅಗ್ಗಳದೇವನ ಕೆಳೆಯಂ' ಎಂದು ಕರೆದುಕೊಂಡಿರುತ್ತಾನೆ. ಮಲ್ಲಿಕಾರ್ಜುನನ 'ಸೂಕ್ತಿ ಸುಧಾರ್ಣವ', ಅಭಿನವವಾದಿ ವಿದ್ಯಾನಂದನ 'ಕಾವ್ಯಸಾರ' ಮತ್ತು ೧೯ನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಹಿರಣ್ಯಗರ್ಭ ಕವಿಯ 'ವಿಶ್ವಕೃತಿ ಪರೀಕ್ಷಣ,' ಈ ಕೃತಿಗಳಲ್ಲಿ ಚಂದ್ರಪ್ರಭ ಪುರಾಣದ ಪದ್ಯಗಳು ಉದ್ಧೃತವಾಗಿವೆ. ಶಬ್ದಾನುಶಾಸನದ ಕರ್ತೃ ಭಟ್ಟಾಕಳಂಕ, ರಸರತ್ನಾಕರದ ಕರ್ತೃ ಸಾಳ್ವ ಇವರೂ ಅಗ್ಗಳದೇವನ ಪದ್ಯಗಳನ್ನು ಲಕ್ಷ್ಯವನ್ನಾಗಿ ಕೊಟ್ಟಿರುತ್ತಾರೆ.

## ಕವಿಯ ಅಗ್ಗಳಿಕೆ

ಅಗ್ಗಳದೇವನು ತನ್ನನ್ನು 'ಸಾಹಿತ್ಯ ವಿದ್ಯಾವಿನೋದನ' 'ಉಭಯ ಕವಿತಾ ವಿಶಾರದ' ಎಂದು ಸಂಭಾವಿಸಿ ಕೊಂಡಿರುತ್ತಾನೆ. ಇದರಿಂದ ಕನ್ನಡದ ಜೊತೆಗೆ ಮತ್ತೊಂದು ಭಾಷೆಯಲ್ಲಿ ಈ ಕವಿಗೆ ಕವಿತಾ ಸಾಮರ್ಥ್ಯವಿತ್ತು ಎಂಬುದು ವೇದ್ಯವಾಗುತ್ತದೆ. ಮತ್ತೊಂದು ಭಾಷೆ ಸಂಸ್ಕೃತವೋ ಪ್ರಾಕೃತವೋ ಆಗಿರಬೇಕು. ಆದರೆ ಈ ಭಾಷೆಗಳಲ್ಲಿ ಅಗ್ಗಳದೇವನಿಂದ ರಚಿತವಾದ ಆವ ಕಾವ್ಯವೂ ಉಪಲಬ್ಧವಾಗಿಲ್ಲ. ಕನ್ನಡ ಕೃತಿಯಾದ ಈ ಚಂದ್ರಪ್ರಭ ಪುರಾಣದಲ್ಲೇ ಕೆಲವೆಡೆಗಳಲ್ಲಿ ಕೆಲವು ಸಂಸ್ಕೃತ ಶ್ಲೋಕಗಳನ್ನು ರಚಿಸಿ ಸೇರಿಸಿರುವುದರ ಮೂಲಕ ಸಂಸ್ಕೃತ ಭಾಷೆಯ ಕವಿತಾ ಚಾತುರ್ಯವನ್ನು ಪ್ರಕಾಶಪಡಿಸಿರುವುದರಿಂದ, ಈತನು ಉಭಯಭಾಷಾ ವಿಶಾರದನೆಂದು ಹೇಳಿಕೊಂಡಿರಬಹುದು. ಸಂಗೀತ, ನಾಟ್ಯ ಮೊದಲಾದ ಕಲೆಗಳ ವಿವರವನ್ನು

ಸಮಯವರಿತು ಕಾವ್ಯಮಧ್ಯದಲ್ಲಿ ಅಳವಡಿಸಿರುವುದರಿಂದ 'ಲೋಕ ದೊಳಗೆ ವರ್ತಿಪ ವಿಲಸತ್ಕಲೆಗಳೆನಿತನಿತರೊಳಮಗ್ಗಳಗಣ್ಣಂ' (ಆ ೧–ಪ ೫೭) ಎಂದು ಹೇಳಿಕೊಂಡಿರುವುದು ಸಹಜವಾಗಿದೆ.

> 'ಕಾವ್ಯತತಿಯೊಳ್ ಶಬ್ದಂ ಶಾಬ್ದಿಕ ಸಮ್ಮತಮರ್ಥಮರ್ಥ ದೃಷ್ಟಿ ಮನಃಕೌತುಕ ಜನಕಂ, ಭಾವಂ ಭಾವುಕ ಭವ್ಯಂ'(ಆ ೧-ಪ ೫೮) ಎಂದೂ, 'ವಾಕ್ಪ್ರಗುಂಫನಂ ತಿಂಗಳ ತಣ್ಣನಪ್ಪ ಕದಿರ್ದೊಂಗಲೊಳಭ್ಯಸಿಸಿತ್ತೊ,. ಕಾಮಬಾಣಂಗಳೊಳಾದ ಮೋದಿದುದೊ. ಬಂದ ಬಸಂತದ ಕಮ್ಮನಪ್ಪಲರ್ ತಾಂ ಗುರುವಾಗೆ ಕಲ್ತುದೊ, ವಿಳಾಸವತೀ ನಯನ ತ್ರಿಭಾಗ ದೊಳ್ ಸಂಗಳಿಸಿತ್ತೊ ಮೋಹನಂ' (ಆ ೧–ಪ ೫೯)

ಎಂದೂ ವಿಪಶ್ಚಿದ್ವ್ರಂದ ತನ್ನನ್ನು ಕೊಂಡಾಡಿ 'ವಾಕ್ಸುವರ್ಣ ದೊಳೊಲವಿಂ ಸಂದ ಜಿನಚರಿತ ರತ್ನಮಂ ಕೇವಣಿಸು' ಎಂದು ಕೇಳಿಕೊಂಡಿರುವಂತೆ ತಿಳಿಸಿರುವುದರಿಂದ ಈತನ ಪಾಂಡಿತ್ಯ ಮತ್ತು ಕವಿತಾ ಸಾಮರ್ಥ್ಯ ಅಸಾಧಾರಣವಾದುದು ಎಂದು ಸ್ಪಷ್ಟಪಡು ತ್ತದೆ.

ಈ ಕವಿಯ ಕಾಲದಿಂದೀಚೆಗೆ ಇದ್ದ ಕೆಲವು ಕವಿಗಳು ಈತನ ಕಾವ್ಯವನ್ನು ನೋಡಿ ಮೆಚ್ಚಿ 'ಅಗ್ಗದಗ್ಗಳಂ' 'ಅಗ್ಗಳಂಗಮಗ್ಗಳ ರೊಳರೇ' 'ರಂಜಿಪಗ್ಗಳಂ' ಎಂದು ಮೊದಲಾಗಿ ಶ್ಲಾಘಿಸಿರುವರ ಲ್ಲದೆ ತಮ್ಮ ಕೃತಿಗಳಲ್ಲಿ 'ಅಗ್ಗಳನ ಕಾವ್ಯದ ಒಳ್ಪು' 'ಕಾಣ್ಕೆಯೂ' ಕೂಡಿಬರಲಿ ಎಂದು ಆಶಿಸಿದ್ದಾರೆ. ಅಗ್ಗಳನು ಕವಿ ಕಲಭಯೂ ಥಾಧಿನಾಥ. ಆತನ ಕೃತಿ ಮಂಧರ ಪರ್ವತದಂತೆ ಮಹೋನ್ನತಿ ಯುಕ್ತವಾದದ್ದು. 'ಉಭಯ ಕವಿತಾ ವಿಶಾರದ' 'ಜೈನ ಮನೋ ಹರ ಚರಿತ' ಎನ್ನುವುದು ವಿಪಶ್ಚಿದ್ವ್ರಂದದಿಂದ ಈ ಕವಿಗೆ ದೊರೆತ ಮನ್ನಣೆ ಇರಬಹುದು. 'ಅಗ್ಗಳದೇವ' ಎಂಬ ಹೆಸರೇ ಸೂಚಿಸು ವಂತೆ ಕಾವ್ಯರಚನೆಗೆ ವಿದ್ವಜ್ಜನದ ಪ್ರೇರಣೆ, ಸಾಳ್ವನಂಥ ರಸ

ವಿಮರ್ಶಕ, ಭಟ್ಟಾಕಳಂಕನಂಥ ವೈಯಾಕರಣಿ ಇವರು ಈತನ ಪದ್ಯಗಳನ್ನು ಲಕ್ಷ್ಯವಾಗಿ ಉದಾಹರಿಸಿರುವುದು ಇವೇ ಈ ಕವಿಯ ಪಾಂಡಿತ್ಯ ಮತ್ತು ಪ್ರೌಢಿಮೆಗಳ ಅಗ್ಗಳಿಕೆಗೆ ಪ್ರತೀಕವಾಗಿವೆ.

## ಚಂದ್ರಪ್ರಭ ಪುರಾಣ[1]

ಇದು ಎಂಟನೆಯ ತೀರ್ಥಂಕರನಾದ ಚಂದ್ರಪ್ರಭನನ್ನು ಕುರಿತು ರಚಿತವಾಗಿರುವ ಚಂಪೂರೂಪದ ಪೌರಾಣಿಕ ಕಾವ್ಯ. ಇದರ ಪ್ರಾರಂಭದಲ್ಲಿ ಚಂದ್ರಪ್ರಭನ ಸ್ತುತಿ ಇದೆ. ಬಳಿಕ ಜೈನಸಂಪ್ರದಾಯವನ್ನನುಸರಿಸಿ, ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧು ಈ ಪಂಚಪರಮೇಷ್ಠಿಗಳು, ಪಂಚ ಗುರುಗಳು, ಗಣಧರರು, ಜಿನಧರ್ಮ, ಜ್ವಾಲಾಮಾಲಿನಿ, ವಿಜಯ ಯಕ್ಷ, ಜಿನವಚನ, ಸರಸ್ವತಿ, ಶ್ರುತಕೇವಲಿಗಳು, ಕುಂಡ ಕುಂದಾಚಾರ್ಯರು, ಭೂತಬಲಿ ಪುಷ್ಪದಂತಾಚಾರ್ಯರು, ವೀರ ಸೇನ, ಮೊದಲಾದ ಮಾಘನಂದಿ ಭಟ್ಟಾರಕರವರೆಗಿನ ಗುರುಗಳನ್ನು ಕ್ರಮವಾಗಿ ಅಗ್ಗಳದೇವನು ಸ್ತುತಿಸಿದ್ದಾನೆ. ಅನಂತರ ಪವಿತ್ರ ವಾದ ಜಿನರಾಜ ಚರಿತ್ರೆಯನ್ನು ಪ್ರೀತಿಯಿಂದ ಹೇಳಿ ಉಭಯ ಲೋಕ ಶುಭಾಸ್ಪದರಾದ ಪಂಡಿತೋತ್ತಮರ ಗುಣವು ಗುಣಾಕೃತಿ ಯಿಂದ ತನ್ನ ಮನೋಮೃಣಾಲದಲ್ಲಿ ನೆಲಸಲೆಂದು ಕವಿ ಆಶಿಸಿ ದ್ದಾನೆ. ಹೀಗೆ ಜೈನಮುನಿವೃಂದ ಮತ್ತು ಪಂಡಿತೋತ್ತಮರನ್ನು ಸ್ತುತಿಸಿದ ಮೇಲೆ ಕುಕವಿಗಳನ್ನು ನಿಂದಿಸಿರುತ್ತಾನೆ.

---

1. ಅಭಿನವವಾದಿವಿದ್ಯಾನಂದ ಸಂಕಲಿತವಾದ "ಕಾವ್ಯಸಾರ"ದ ಮಾತೃಕೆ ಯಲ್ಲಿ ಈ ಗ್ರಂಥದಿಂದ ಉದ್ಧೃತವಾದ ಪದ್ಯಗಳ ಕೆಳಗೆ "ಅಗ್ಗಳಲೀಲಾ ವತಿ" ಎಂದು ಬರೆದಿದೆ—ಚಂ.ಪು. ಗ್ರಂಥ ಪ್ರಶಸ್ತಿಯಿಂದ, ಪು–೩, ಕರ್ಣಾಟಕ ಕಾವ್ಯಕಲಾನಿಧಿ (೧೯೦೩)

ಹಾಲೂ ನೀರೂ ಕೂಡಿದ್ದಾಗ ಹಾಲನ್ನು ಪ್ರತ್ಯೇಕಿಸಲು ರಾಜಹಂಸನಿಗೆ ಮಾತ್ರ ಹೇಗೆ ಸಾಧ್ಯವೋ ಹಾಗೆಯೇ ಸತ್ಕಾವ್ಯವನ್ನು ಗುರುತಿಸಲು ಕವಿರಾಜಹಂಸನಿಗೆ ಮಾತ್ರ ಸಾಧ್ಯ. ಕುಕವಿಗಲ್ಲ. ಕೂರೆಯ ಭಯದಿಂದ ಬಟ್ಟೆಯನ್ನೂ, ಅಜೀರ್ಣ ಭಯದಿಂದ ಒಳ್ಳೆಯ ತುಪ್ಪವನ್ನೂ ಬಿಡಲು ಹೇಗೆ ಅಸಾಧ್ಯವೋ ಹಾಗೆಯೇ ಪರಪೀಡೆಯೇ ಧ್ಯೇಯವಾಗಿರುವ ಕುಕವಿಯ ಆತಂಕಕ್ಕಾಗಿ, ಸದ್ರಸ ಭಾವಯುತ ಕಾವ್ಯವನ್ನು ರಚಿಸದಿರುವುದು ಸರಿಯೇ ? ಬಲ್ಲವರು ಕೇಳಿ ಮೆಚ್ಚಬೇಕು. ವಿದ್ವಜ್ಜನಕ್ಕೆ ಕರ್ಣರಸಾಯನವಾಗಿರಬೇಕು. ಗುರುಗಳು ಕೇಳಿ ತಲೆದೂಗಿಸುವಂತಿರಬೇಕು. ಕವಿಕುಲದಿಂದ ಸೇವಿತವಾದ ಕವಿತಾ ಕಳಹಂಸೆಗೆ ಕೇಳೀ ಲೀಲೆಯು ಪವಿತ್ರವಾದ ಜಿನಕಥಾಮಾನಸದಲ್ಲಿ ಕೂಡಿದರೆ ಮಾತ್ರ ಸಂಭವಿಸುತ್ತದಲ್ಲದೆ ಕೇವಲ ಕ್ಷುದ್ರರೂಪ ರಾಜ, ವಿಟ, ಚೋರ ಕಥೆಗಳೆಂಬ ಪಲ್ವಲಗಳಲ್ಲಿ ಸಂಭವಿಸುತ್ತದೆಯೇ ? ಎಂದು ಅಗ್ಗಳದೇವನು ಸತ್ಕವಿಗಳನ್ನು ಪ್ರಶಂಸಿಸಿ ಕುಕವಿಗಳನ್ನು ನಿಂದಿಸಿ ಜಿನಕಥಾರಚನೆಗೆ ಪ್ರಾಶಸ್ತ್ಯ ನೀಡಿರುತ್ತಾನೆ. ಕೇವಲ ಕವಿತಾಭಿಮಾನದಿಂದ ಅಥವಾ ಹೊತ್ತು ಕಳೆಯುವ ವ್ಯಾಜದಿಂದ ಈ ಕವಿ, ಕಾವ್ಯರಚನೆಗೆ ತೊಡಗಿಲ್ಲ. ಪುಣ್ಯಾಸ್ರವವೇ ಕಾವ್ಯರಚನೆಗೆ ಕಾರಣ ಎಂದು ತನ್ನ ಕಾವ್ಯರಚನೋದ್ದೇಶವನ್ನು ಹೇಳಿ ಪ್ರಾಕ್ತನ ವಿದ್ವಾಂಸರಂತೆ ಜಿನಸ್ತುತಿ ದಕ್ಷತೆ ತನಗೆ ಇಲ್ಲದಿದ್ದರೂ ಜಿನಪ್ರಸಂಗದಿಂದ ಕೃತಿ ತಾನೇ ಪವಿತ್ರವಾಗುತ್ತದೆ ಎಂದು ಕಾವ್ಯರಚನಾ ಪೂರ್ವ ಪೀಠಿಕೆಯನ್ನು ೭೮ ಪದ್ಯಗಳಲ್ಲಿ ಹೇಳಿ 'ಅದೆಂತೆಂದೊಡೆ' ಎಂಬ ವಚನದಿಂದ ಚರಿತ್ರೆಯ ಕಥನಕ್ಕೆ ಪ್ರಾರಂಭಿಸುತ್ತಾನೆ.

'ಮಿಗೆವಂದ ಪೆರ್ಮೆಗಂ ಸ್ಥಿರತೆಗಂ ಆಶ್ರಯಮಾದ ಗಗನ ಲಕ್ಷ್ಮಿಯ ಮಧ್ಯಾಧಿಗತ ವಳಿತ್ರಯ'ದಂತೆ ಇರುವ ಮೂರು

ಲೋಕಗಳ ಮಧ್ಯದಲ್ಲಿ ಏಕ ರಜ್ಜು ವಿಶಾಲವಾದ ತಿರ್ಯಗ್ಲೋಕವಿದೆ. 'ಅಸಂಖ್ಯಾತ ದ್ವೀಪ ಸಮುದ್ರ ಭದ್ರತಾ ಮುದ್ರಿತಮಪ್ಪ' ಈ ಲೋಕದಲ್ಲಿ ಧಾತಕೀ ಷಂಡದಿಂದ ಸುತ್ತುವರಿಯಲ್ಪಟ್ಟ ಜಂಬೂದ್ವೀಪವೂ ಒಂದು. ಈ ದ್ವೀಪದಲ್ಲಿ ಪೂರ್ವ ಮಂಧರದ ಪೂರ್ವ ದಿಕ್ಕಿನಲ್ಲಿ ನಿಷಧ ನೀಳ ಪರ್ವತಗಳ ಮಧ್ಯದಲ್ಲಿ ಜಿನನಾಥನಿಗೆ ಆವಾಸಸ್ಥಾನವಾಗಿ 'ಉರ್ವರೆಯುಂವೊಲ್ ಆವ ನೆಲಂ ನೋಂತುದೋ, ನಿರುಪಮಂ' ಎಂಬಂತಿರುವ ಹದಿನಾರು ನಾಡುಗಳಿಂದ ಕೂಡಿದ ಪ್ರಸಿದ್ಧವಾದ ಪೂರ್ವ ವಿದೇಹವೆಂಬ ದೇಶವಿದೆ.

'ಅಪೂರ್ವ ಸಂಪತ್ಸಾರ ಸ್ವಗೇಹಮಾದ' ಪೂರ್ವ ವಿದೇಹ ಮಹೀಮಧ್ಯದಲ್ಲಿ ನೋಡಲು ರಮ್ಯವಾಗಿರುವ ಸೀತಾನದಿಯ ಇಕ್ಕೆಲಗಳಲ್ಲೂ ಸಸ್ಯ, ಸಂಪತ್ಸಮೃದ್ಧಿಯೂ. ತೆಂಗು, ಕೌಂಗು, ಧಾನ್ಯಗಳೂ ಇದ್ದು ದುರ್ಭಿಕ್ಷವನ್ನು ದೂರಮಾಡಿವೆ. ಮಂಗಳಾವತಿ ಎಂಬ ಹೆಸರಿನ ಈ ದೇಶಕ್ಕೆ ಸಂಪದ್ಭರಿತವಾದ ರತ್ನ ಸಂಚಯಪುರವು ರಾಜಧಾನಿ. ಆ ಊರಿನಲ್ಲಿ, ಜನವಿರಹಿತ ತಾಣವಿಲ್ಲ, ದರಿದ್ರರಿಲ್ಲ, ಧನೋಪಭೋಗರಹಿತರಿಲ್ಲ. ಎತ್ತರವಾದ ಶಿಖರಗಳಿಂದ ಕೂಡಿದ ಚೈತ್ಯಗೃಹ, ಚಂದ್ರಕಾಂತಶಿಲೆ ಮತ್ತು ಸ್ಫಟಿಕದಿಂದ ನಿರ್ಮಿತವಾದ ಉಪ್ಪರಿಗೆಗಳು, ಸುಗಂಧದ ಅಂಗಡಿ, ರಾಜವೀಧಿ, ಗಣಿಕಾಸೌಧ, ಗಜಶಾಲೆ, ಅಶ್ವಶಾಲೆಗಳಿಂದ ಕೂಡಿದ ಈ ನಗರಮಧ್ಯದಲ್ಲಿ ದೇವಾಗಾರ, ಆಯುಧಾಗಾರಗಳಿಂದ ಕೂಡಿದ ಏಳು ಅಂತಸ್ತಿನ ವಜ್ರವೈಡೂರ್ಯ ಮಾಣಿಕ್ಯ ನಿರ್ಮಿತವಾದ ರಾಜಗೃಹವಿದೆ.

ಈ ನಗರದ ರಾಜ ಕನಕಪ್ರಭ. ಪ್ರಭುಶಕ್ತಿ, ಮಂತ್ರಶಕ್ತಿ ಮತ್ತು ಉತ್ಸಾಹ ಶಕ್ತಿ ಈ ಮೂರಕ್ಕೂ ಪ್ರಭುವಾಗಿದ್ದ ಈತನ ರೂಪ ಮನ್ಮಥನನ್ನು ಮೀರಿಸಿದ್ದಿತು. ರಾಣಿ ಸೌವರ್ಣಮಾಲೆ

ಸದಾಚಾರ ಸಂಪನ್ನೆ. ಈ ರಾಜದಂಪತಿಗಳಿಗೆ ಕಾಲಕ್ರಮದಲ್ಲಿ ಜನಿಸಿದ ಪದ್ಮನಾಭ ಎಂಬ ಮಗ ಶೈಶವದಲ್ಲೇ ಅತಿ ವಿವೇಕಿ. ಸುಂದರ ತರುಣನಾಗಿ ಬೆಳೆದ ಈತ ಸುಂದರ ತರುಣಿಯರಿಗೆ ಆಕರ್ಷಕನಾಗಿದ್ದುದಲ್ಲದೆ, ಕನಕಪ್ರಭನಿಗೆ ಇದ್ದ ಹಲವು ಮಕ್ಕಳಲ್ಲಿ ಅತಿಪ್ರಿಯನಾಗಿದ್ದ.

ಒಮ್ಮೆ ಆ ರಾಜ ಉಪ್ಪರಿಗೆಯ ಮೇಲೆ ಕುಳಿತು ನಗರದ ಸೌಂದರ್ಯವನ್ನು ವೀಕ್ಷಿಸುತ್ತಿದ್ದ. ನಗರದ ಬಹಿರುದ್ಯಾನದಲ್ಲಿದ್ದ ಕೆರೆಯ ಸಮೀಪದಲ್ಲಿ ಹಸುವಿನ ಮಂದೆ ಮೇಯುತ್ತಿತ್ತು. ರಾಜನು ಅದನ್ನು ನೋಡುವ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಒಂದು ದೊಡ್ಡ ಗೂಳಿಯು ಬಂದು ಆ ಮಂದೆಯಲ್ಲಿದ್ದ ಮುದಿ ಎತ್ತಿನ ಮೇಲೆ ಬಿದ್ದಿತು. ಗೂಳಿಯ ಆಘಾತದಿಂದ ಆ ಮುದಿ ಎತ್ತು ಜಾರಿ ನೀರಿಗೆ ಬಿದ್ದು ಕೆಸರಿನೊಳಗೆ ಸಿಕ್ಕಿ ಕೂಡಲೇ ಪ್ರಾಣ ಬಿಟ್ಟಿತು. ಇದನ್ನು ಕಂಡ ಕನಕಪ್ರಭನಿಗೆ ವಿಸ್ಮಯವೂ ನಿರ್ವೇದವೂ ಉಂಟಾಗುತ್ತದೆ. ಯೌವನಕ್ಕೆ ಮುಪ್ಪು ಶತ್ರು ವೆಂದು ಕಂಡೂ ಕೇಳಿಯೂ, ಮಾನವನು ತನ್ನ ಇಷ್ಟಪ್ರಾಪ್ತಿಯ ಕಡೆಗೆ ದೃಷ್ಟಿಹರಿಸಿ ಅದರಿಂದ ಎಷ್ಟು ಸುಖಪಡುತ್ತಾನೋ ಅದರ ವಿಯೋಗದಿಂದ ಅಷ್ಟೇ ದುಃಖವನ್ನೂ ಪಡುತ್ತಾನೆ. ಅದಕ್ಕಾಗಿಯೇ ಸತ್ಪುರುಷರು ನಿವೃತ್ತಿ ಮಾರ್ಗವನ್ನವಲಂಬಿ ಸುತ್ತಾರೆ. 'ನೆಯ್ದಿಲೆಸಳೆಂ'ದು ಬಗೆದು, ಹರಿತವಾದ ಕತ್ತಿಯ, ನೀಲಿಯಬಣ್ಣದ ಅಲಗಿನ ಮೇಲೆ ದುಂಬಿ ಬಿದ್ದು ಸಾಯುವಂತೆ, ದುಃಖವನ್ನೇ ಸುಖವೆಂದು ಭಾವಿಸಿ ಅದನ್ನು ಆಶ್ರಯಿಸಿ ಕೆಟ್ಟೆನಲ್ಲಾ ಎಂದು ಕನಕಪ್ರಭ ಚಿಂತಿಸುತ್ತಾನೆ. ಕೂಡಲೇ ಆತನಿಗೆ ಸಂಸಾರ ದಲ್ಲಿ ವೈರಾಗ್ಯ ಹುಟ್ಟುತ್ತದೆ.

ಪ್ರತಿಷೇಧಿಸುತ್ತಿದ್ದ ಮಗ ಪದ್ಮನಾಭನಿಗೆ ಸಮಾಧಾನ ಹೇಳಿ

ರಾಜ್ಯವನ್ನು ತೊರೆದು ತಪೋರಾಜ್ಯಕ್ಕೆ ತೆರಳುತ್ತಾನೆ ಪದ್ಮ ನಾಭನ ಮಗ ಸ್ವರ್ಣನಾಭ. ಸಕಾಲದಲ್ಲಿ ಅವನಿಗೆ ಯೌವರಾಜ್ಯಾ ಭಿಷೇಕವಾಗುತ್ತದೆ. ಒಮ್ಮೆ ಪದ್ಮನಾಭನು ಒಡ್ಡೋಲಗದಲ್ಲಿ ದ್ದಾಗ, ವನಪಾಲನೊಬ್ಬನು ತಂದ ಸರ್ವಋತುಊದ್ಭವ ಫಲ ಪುಷ್ಪಗಳನ್ನು ನೋಡಿ 'ಕಾಲತ್ರಯ ಋತುಷಟ್ಕ ಉಚಿತಂಗಳಪ್ಪ ಫಲಪ್ರಸವಂಗಳು' ಏಕಕಾಲದಲ್ಲಿ ಹೇಗಾಯಿತಂ? ಎಂದು ವಿಸ್ಮಯ ಪಡುತ್ತಾನೆ. ಆಗ ಆ ವನಮಹತ್ತರನು ಅದಕ್ಕೆ ಕಾರಣರಾದ 'ಅನವದ್ಯ ಚರಿತನ್ ಒರ್ವ ಮುನಿಮುಖ್ಯಂ– ಮನೋಹರೋದ್ಯಾನವಂ ಬಂದು ಪೊಕ್ಕಂ' ಎಂದು ಹೇಳಿ, ಶ್ರೀಧರನೆಂಬ ಆ ಮುನಿಯ ತಪಃ ಪ್ರಭಾವವನ್ನು ರಾಜನಲ್ಲಿ ಬಿನ್ನಯಿಸುತ್ತಾನೆ. ಆ ಸುದ್ದಿಯನ್ನು ಕೇಳಿದ ಕೂಡಲೆ ಪದ್ಮ ನಾಭನು ಅಂಜಲಿಬದ್ಧನಾಗಿ ಆಸನದಿಂದಿಳಿದು ಆ ದಿಕ್ಕಿನಲ್ಲಿ ಏಳು ಹೆಜ್ಜೆ ನಡೆದು ವಂದಿಸಿ ಸುದ್ದಿ ತಂದ ವನಪಾಲಕನಿಗೆ ಪಾರಿತೋಷಕ ವನ್ನೀಯುತ್ತಾನೆ. ಸಕಲ ಪರಿಜನರೊಡನೆ ಅಲ್ಲಿಗೆ ಹೋಗಿ ಚಂದ್ರನಂತೆ ಬೆಳಗುತ್ತಿದ್ದ ಆ ಮುನಿಯನ್ನು ಮೂರುಸಲ ಪ್ರದಕ್ಷಿಣೆಮಾಡಿ ನಮಸ್ಕರಿಸುತ್ತಾನೆ. ಮುನಿಯು ಮೊದಲು ರಾಜನಿಗೆ ಜೀವ ಸ್ಥಿತಿಯನ್ನು ತಿಳಿಸಿ, ಅವನ ಅಪೇಕ್ಷೆಯಂತೆ, ರಾಜನ ಹಿಂದಿನ ಭವಾವಳಿಯ ವಿವರಗಳನ್ನು ತಿಳಿಸುತ್ತಾನೆ.

ಪುಷ್ಕರಾರ್ಧ ದ್ವೀಪದಲ್ಲಿ ಸೀತಾನದಿಯ ಉತ್ತರಕ್ಕೆ ಸುಗಂಧಿ ಎಂಬ ದೇಶವಿದೆ. ಅದರಲ್ಲಿ ಲಕ್ಷ್ಮಿಯ ಆವಾಸಸ್ಥಾನವಾದ ಶ್ರೀಪುರವು ಒಂದು ನಗರಿ. ಇದರ ರಾಜ ಶ್ರೀಷೇಣ; ರಾಣಿ ಶ್ರೀಕಾಂತೆ. ಒಮ್ಮೆ ಧರ್ಮಕಥಾ ಪ್ರಸಂಗ ಸಂದರ್ಭದಲ್ಲಿ ವಿಧಿ, ದಾತೃ, ದ್ರವ್ಯ, ಫಲಭೇದ ಎಂಬ ಐದು ಅನ್ನದಾನ ವಿಧಗಳೂ, 'ವಿಧಿ'ಯೊಂದರಲ್ಲೇ ಬಂದವರನ್ನಿದಿರ್ಗೊಂಡು, ಉಚ್ಚಾಸನದಲ್ಲಿ

ಕುಳ್ಳಿರಿಸುವುದೇ ಮೊದಲಾದ ಒಂಬತ್ತು ಕ್ರಿಯೆಗಳೂ, ದಾತೃವಾದ ಭವ್ಯನಿಗೆ ಏಳು ಗುಣಗಳೂ, ಆಹಾರ–ಕನಕಾದಿ ಯೋಗ್ಯ–ಅಯೋಗ್ಯ ದ್ರವ್ಯಗಳೂ, ಮೂರು ಬಗೆಯ ಪಾತ್ರಗಳೂ, 'ಸ್ವರ್ಗ ಭೋಗ ಭೂಮಿ ಸಂಭವ'ವೆಂಬ ಫಲವೂ ಉಂಟೆಂಬ ವಿಷಯ ವನ್ನು ಸುಶ್ರುತನೆಂಬ ಪುರೋಹಿತನು ವಿವರಿಸುತ್ತಾನೆ. ಹುಸಿ, ಹಸಿವು, ಆಮಯ ಮತ್ತು ಅಸುರಾದಿ ಕ್ರೂರಸತ್ವಬಾಧೆಗಳಿಲ್ಲ ದಿದ್ದಾಗ, ಭೋಗಭೂಮಿ ಸ್ವರ್ಗಕ್ಕಿಂತ ಅಧಿಕವೆನಿಸುತ್ತದೆ. ಭೋಗ ಭೂಮಿಯಲ್ಲಿ, ಪಾತ್ರತ್ರಿತಯದಾನ ಫಲಗಳಿಂದ, ಏಕ, ದ್ವಿ, ತ್ರಿ, ಪಲ್ಯೋಪಮಾಯುಷ್ಯರು ದಂಪತಿಗಳಾಗಿ ಹುಟ್ಟುತ್ತಾರೆ. ಕಾಮ, ರಾಗ, ರಸವಾರಿಧಿಯಲ್ಲಿ ನಲವಿಂದ ಕೂಡಿ ಇರುತ್ತಾರೆ. ಒಂಬತ್ತು ತಿಂಗಳು ಕಳೆದಮೇಲೆ ಶಿಶು ಜನಿಸಲು, ದಂಪತಿಗಳು, ಕ್ಷುತ್‌ಜೃಂಭಣವ್ಯಾಜದಿಂದ ಮೃತರಾಗುತ್ತಾರೆ. ಈ ರೀತಿ ಅನ್ನ ದಾನ ಮಾಹಾತ್ಮ್ಯವನ್ನು ವಿವರಿಸಿದ ಸುಶ್ರುತನಿಗೆ ರಾಣಿಯು ತಾಂಬೂಲ ಕೊಟ್ಟು ಕಳುಹಿಸಿ, ತನುಜೋದಯ ಮತ್ತು ಜನಕ ಜನನಿಯ ಮರಣ ಇವು ಏಕಕಾಲದಲ್ಲಿ ಸಂಭವಿಸುವುದು ಏನು ವಿಸ್ಮಯವೋ? ಎಂದು ತನಗೆ ತಾನೆ ಯೋಚಿಸುತ್ತಾಳೆ. ಆಕೆಯ ಸಮೀಪದಲ್ಲಿದ್ದ ಕಳಭಾಷಿಣಿಯೆಂಬ ಸಖಿಯು ಮುಖವನ್ನು ನೋಡಿ, 'ಬೇಟಕ್ಕೆ ಕೂಟಂ, ಕೂಟಕ್ಕೆ ತನುಜರ್, ಆ ತನುಜರೊಳಗೆ ಮುದ್ದಾಟ, ಅದೇ ಫಲ' ಎಂದು ಪುತ್ರದೋಹಳದಿಂದ ಆಕುಲಿತೆಯಾಗಿ ಚಿಂತಿಸುತ್ತಾಳೆ. ಆ ವೇಳೆಗೆ ಅಲ್ಲಿಗೆ ಬಂದ ರಾಜ, ಸಖಿ ಕಳಭಾಷಿಣಿಯಿಂದ ರಾಣಿಯ ಚಿಂತೆಗೆ ಕಾರಣವನ್ನು ತಿಳಿದು, ವಿಧಿಯ ಕೃಪೆಯಿಂದ ಏನನ್ನೂ ಪಡೆಯಲು ಸಾಧ್ಯ ಎಂದು ರಾಣಿಯನ್ನು ಸಮಾಧಾನಪಡಿಸುತ್ತಾನೆ.

ಕೆಲವು ಕಾಲ ಕಳೆದಮೇಲೆ, ಅನಂತನೆಂಬ ಚಾರಣಯೋಗಿ

ಪಟ್ಟಣದ ಹೊರ ಉದ್ಯಾನದಲ್ಲಿ ಬಂದಿರುವುದನ್ನರಿತು ಶ್ರೀಷೇಣನು ಅವರ ಸಮೀಪಕ್ಕೆ ಹೋಗಿ ಭವಸ್ಥಿತಿಯ ಅರಿವಿದ್ದರೂ ವಿರಕ್ತಿಭಾವ ಉಂಟಾಗದ ಕಾರಣವನ್ನು ತಿಳಿಸಬೇಕೆಂದು ಯೋಗಿಯನ್ನು ಕೇಳುತ್ತಾನೆ. ನಂದನ ಲಾಭವಾಂಛೆ ಇರುವ ವರೆಗೆ ಅದು ಸಾಧ್ಯವಿಲ್ಲ ಎಂದು ಯೋಗಿಗಳಿಂದ ಅವನಿಗೆ ತಿಳಿಯು ತ್ತದೆ. ಅಷ್ಟೇ ಅಲ್ಲದೆ, ಪೂರ್ವಜನ್ಮದಲ್ಲಿ ಸುನಂದೆ ಎಂಬ ಹೆಸರಿನಲ್ಲಿ ಹುಟ್ಟಿದ್ದ ಈಗಿನ ರಾಣಿಯು ಓರ್ವ ವೈಶ್ಯಸ್ತ್ರೀಯ ಪ್ರಥಮ ಗರ್ಭ ಕ್ಲೇಶವನ್ನು ನೋಡಿ, ತನ್ನ ಯಾವ ಜನ್ಮದಲ್ಲಿಯೂ ನವವಯಸ್ಸಿನಲ್ಲಿ ಗರ್ಭಧಾರಣೆ ಆಗದಿರಲಿ ಎಂಬ ಮನಸ್ಸುಳ್ಳವ ಳಾಗಿದ್ದುದನ್ನು ಯೋಗಿಯು ತಿಳಿಸಿ, ಅಣುವ್ರತದ ಫಲದಿಂದ ಸೌಧರ್ಮದಲ್ಲಿ ಅಮರತ್ವ ಹೊಂದಿ ಈಗ ಆಕೆ ದುರ್ಯೋಧನನ ಮಗಳಾಗಿ ಹುಟ್ಟಿ, ರಾಣಿಯಾಗಿರುವುದನ್ನು ತಿಳಿಸುತ್ತಾನೆ. ಮುಂದೆ ಕುಲದೀಪಕನಾದ ಮಗನು ಹುಟ್ಟುತ್ತಾನೆ ಎಂದೂ ತಿಳಿಸುತ್ತಾನೆ.

ತರುವಾಯ, ರಾಜದಂಪತಿಗಳಿಗೆ, ಶ್ರೀವರ್ಮನೆಂಬ ಮಗ ಹುಟ್ಟಿ, ಯೌವನಸ್ಥನಾಗಲು ಪ್ರಭಾವತಿ ಎಂಬ ಕನ್ಯೆಯು ಈ ದಂಪತಿಗಳಿಗೆ ಸೊಸೆಯಾಗಿ ಬರುತ್ತಾಳೆ. ಶ್ರೀಷೇಣ ಮಹಾ ರಾಜನು ಮಗನಿಗೆ ರಾಜ್ಯಾಭಿಷೇಕ ಮಾಡಿ ದಿಗಂಬರದೀಕ್ಷೆ ಪಡೆದು ಕರ್ಮಮುಕ್ತನಾಗುತ್ತಾನೆ.

ಹೀಗಿರಲು, ಒಮ್ಮೆ ಮಳೆಗಾಲದಲ್ಲಿ ಆಕಾಶವು, ಕಾರ್ಮೋಡ ಮಿಂಚು ಕಾಮನಬಿಲ್ಲುಗಳಿಂದ ಕೂಡಿ ಕಂಗೊಳಿಸು ತ್ತಿದ್ದುದು ಶ್ರೀವರ್ಮರಾಜನ ದೃಷ್ಟಿಗೆ ಬೀಳುತ್ತದೆ. ಅವನು ಅದನ್ನು ಪರಿಭಾವಿಸುತ್ತಿದ್ದಂತೆಯೇ, ನರರ ಸಿರಿ ಕರಗುವಂತೆ, ನರರ ವಯೋಲಕ್ಷ್ಮಿ ಕರಗುವಂತೆ, ಮತ್ತೆ "ನರರಾಯು ಕರಗು

ವಂತಿರೆ" ಆ ಇಂದ್ರ ಧನುಸ್ಸು 'ನೋಡುತ್ತಿರುವಂತೆಯೇ ಗಗನಾಂತರದಲ್ಲಿ ಕರಗುತ್ತದೆ.' ಆಗ ರಾಜನಿಗೆ ಸಂಸಾರದ ಅನಿತ್ಯತೆಯು ಅರಿವಾಗುತ್ತದೆ. ಆತನು 'ವೈರಾಗ್ಯರಸಾವಗಾಹಿತಮತಿ' ಯಾಗುತ್ತಾನೆ. ತನ್ನ ಮಗ ಶ್ರೀಕಾಂತನಿಗೆ ಪಟ್ಟಕಟ್ಟಿ, ಶ್ರೀಪ್ರಭಾಚಾರ್ಯರಿಂದ ಜಿನದೀಕ್ಷೆ ಪಡೆದು, ಸಮಾಧಿ ವಿಧಿಯಿಂದ ಮೃತನಾಗಿ ಸೌಧರ್ಮ ಕಲ್ಪದ ಶ್ರೀಪ್ರಭವೆಂಬ ವಿಮಾನದಲ್ಲಿ ಜನಿಸುತ್ತಾನೆ. ಆಗ ಪುಷ್ಪವೃಷ್ಟಿಯಾಗಿ ಎಲ್ಲೆಡೆಗಳಲ್ಲಿಯೂ ಮಂಗಳವಾದ್ಯ ಮೊಳಗಿ, ದೇವ ನರ್ತಕಿಯರು ನರ್ತಿಸುತ್ತಾರೆ. ಭವಪ್ರತ್ಯಯಜ್ಞಾನದಿಂದ ತಾನು ಇಲ್ಲಿ ಜನಿಸಿರುವುದು ಜಿನನಾಥನ ಪೂಜೆ ಮತ್ತು ತಪಸ್ಸಿನ ಫಲ ಎಂದು ಅರಿತುಕೊಳ್ಳುತ್ತಾನೆ. ದೇವತೆಗಳ ಸೂಚನೆಯಂತೆ 'ಶ್ರೀಧರ'ನೆಂಬ ಅನ್ವರ್ಥನಾಮ ಹೊಂದಿ, ಜಿನಬಿಂಬವನ್ನು ಪ್ರತಿಷ್ಠಿಸಿ ಎಂಟು ವಿಧದ ಅರ್ಚನೆಗಳಿಂದ ಎಂಟು ದಿವಸಗಳು ಪೂಜೆಮಾಡಿ ಎರಡು ವರ್ಷಗಳ ಕಾಲ ಸ್ವರ್ಗಸೌಖ್ಯವನ್ನನುಭವಿಸುತ್ತಾನೆ. ಈ ಎರಡು ವರ್ಷಗಳಲ್ಲಿ, ಕೊನೆಯ ಆರು ತಿಂಗಳು ಆಯುಃಪ್ರಮಾಣ ಉಳಿದಿರುವಾಗ, ಮುಖಬಾಡಿ, ದೇಹಕಾಂತಿ ಮಸುಕಾಗುತ್ತದೆ. ಇದರಿಂದ ಅವಸಾನ ಸಮೀಪಿಸಿತೆಂದು ತಿಳಿದು ಉಳಿದ ಆರು ತಿಂಗಳನ್ನು ಜಿನಚಿಂತನೆಯಲ್ಲಿ ಕಳೆದು, ಅವಸಾನ ಹೊಂದಿ, ಅಳಕಾದೇಶದ ಕೌಶಲ ನಗರದಲ್ಲಿ ಅಜಿತಂಜಯರಾಜ ಮತ್ತು ಅಜಿತಸೇನ ರಾಣಿಗೆ ಚಕ್ರವರ್ತಿ ಲಕ್ಷಣಗಳಿಂದ ಕೂಡಿದ ಅಜಿತಸೇನನೆಂಬ ಮಗನಾಗಿ ಹುಟ್ಟುತ್ತಾನೆ. ಮುಂದೆ ಯೌವರಾಜ್ಯಾಭಿಷೇಕವಾಗುತ್ತದೆ.

ಒಮ್ಮೆ ಎಲ್ಲರೂ ರಾಜಸಭಾಭವನದಲ್ಲಿ ಮಂಡಿಸಿರುವಾಗ ಆಕಾಶಮಾರ್ಗದಲ್ಲಿ ಹೋಗುತ್ತಿದ್ದ ಚಂಡರುಚಿ ಎಂಬ ಅಜಿತ

ಸೇನನ ಜನ್ಮಾಂತರ ವೈರಿ, ಸಭೆಯನ್ನು ಮೋಹಗೊಳಿಸಿ ಯುವ ರಾಜನನ್ನು ಅಪಹರಿಸುತ್ತಾನೆ. ಆ ವೇಳೆಗೆ ತಪೋಭೂಷಣನೆಂಬ ಚಾರಣನು ಅಲ್ಲಿಗೆ ಬಂದು ಪೂರ್ವ ವೈರದಿಂದ ಒಬ್ಬ ರಾಕ್ಷಸನು ಯುವರಾಜನನ್ನು ಅಪಹರಿಸಿರುವುದನ್ನು ತಿಳಿಸಿ, ಇನ್ನು ಕೆಲವು ದಿವಸಗಳಲ್ಲಿ ಷಟ್ಖಂಡ ಕ್ಷಿತಿನಾಥನಾಗುವ ಪುಣ್ಯಾಧಿಕ್ಯದಿಂದ ಅಜಿತಸೇನ ಹಿಂದಿರುಗುವುದನ್ನು ತಿಳಿಸಿ ಮಿಂಚಿನಂತೆ ಮಾಯ ವಾಗುತ್ತಾನೆ.

ಇತ್ತ ಚಂಡರುಚಿಯು, ದುಷ್ಟಜಲಚರದಿಂದ ಕೂಡಿ ಕ್ರೂರಮೃಗಗಳಿಂದಾವೃತವಾದ ಒಂದು ಸರೋವರದಲ್ಲಿ ರಾಜ ಕುಮಾರನನ್ನು ಒಗೆಯುತ್ತಾನೆ. ತನ್ನ ವಿಕ್ರಮೈಕ ಸಹಾಯನಾಗಿ ಆತನು ಸರಸ್ಸಿನ ಹೊರಬಂದು, ವಿಶ್ರಮಿಸಿಕೊಂಡ ಬಳಿಕ ಉತ್ತರಾಭಿ ಮುಖವಾಗಿ ನಡೆದುಹೋಗುತ್ತಾನೆ. ಪರುಷಾಟವಿಯಲ್ಲಿ ಒಂದು ಬೇಡರ ಹಳ್ಳಿಯನ್ನು ಹಾದು ವಂಶಧರವೆಂಬ ಬೆಟ್ಟವನ್ನೇರುತ್ತಾನೆ. ಅಲ್ಲಿ 'ಬಿಟ್ಟ ಕುರುಳ್, ಪೊದಟ್ದಿ ಕಿಸುಗಣ್ ನಸುಗೆತ್ತುವ ಮೀಸೆ ಬಾಂಗೆ ತೊಂತಿಟ್ಟವೊಲಪ್ಪ ಮೆಯ್' ಉಳ್ಳ, ಬೆಟ್ಟದ ರಕ್ಷಕನೆಂದು ಹೇಳಿಕೊಂಡ, ಘೋರಾಕಾರದ ಜಟ್ಟಿಯೊಬ್ಬನು ಈತನಿಗೆ ಎದುರಾಗುತ್ತಾನೆ. ಅವನನ್ನು ಮಲ್ಲಯುದ್ಧದಲ್ಲಿ ಗೆಲ್ಲಲು, ಆ ಜಟ್ಟಿಯು ಆಕಾಶಕ್ಕೆ ನೆಗೆದು ರತ್ನಕಿರೀಟ ಹಾರ ಕಂಕಣಗಳೊಡನೆ ತನ್ನ ನಿಜಸ್ವರೂಪದಿಂದ ಶೋಭಿಸಿ ಆನಂದಪಟ್ಟು ಅಜಿತಸೇನನ ಮೇಲೆ ಪುಷ್ಪವೃಷ್ಟಿ ಕರೆಯುತ್ತಾನೆ. ಆಗ ರಾಜಕುಮಾರನು 'ನೀನಾರು ?' ಎಂದು ಅವನನ್ನು ಪ್ರಶ್ನಿಸಲು, ಆತನು, ತಾನು ಹಿರಣ್ಯನೆಂಬ ಭವನಾಮರನೆಂದೂ ಯುವರಾಜನ ಭುಜಬಲ ಪರೀಕ್ಷೆಗೆ ಈ ರೂಪ ತಳೆದನೆಂದೂ, ಯುವರಾಜನ ಮೂರನೆಯ ಭವದಲ್ಲಿ ಸುಗಂಧಿಳ ದೇಶದ ಶ್ರೀಪುರಕ್ಕೆ ರಾಜನಾಗಿದ್ದಾಗ ಶಶಿ–

ಸೂರ್ಯರೆಂಬಿಬ್ಬರಲ್ಲಿ ನಡೆದ ಧನಾಪಹರಣ ಸಂದರ್ಭದಲ್ಲಿ ಸೂರ್ಯನಿಗೆ ಧನ ಕೊಡಿಸಿ ಶಶಿಯನ್ನು ಘಾತಿಸಲು, ಹಲವು ಜನ್ಮಗಳ ನಂತರ ಶಶಿಯು ಚಂಡರುಚಿಯಾಗಿಯೂ, ಸುಕೃತ ವಿಶೇಷದಿಂದ ಸೂರ್ಯನಾಗಿದ್ದ ತಾನೇ ಈಗ ಹಿರಣ್ಯನಾಗಿಯೂ ಜನಿಸಿರುವುದನ್ನು ತಿಳಿಸಿ, ಅಸಹಾಯದ ಸಂದರ್ಭದಲ್ಲಿ ತನ್ನನ್ನು ಸ್ಮರಿಸಬೇಕೆಂದು ತಿಳಿಸಿ ಅದೃಶ್ಯನಾಗುತ್ತಾನೆ.

ತನ್ನ ಅಪಹರಣದಿಂದ ಇಲ್ಲಿಯವರೆಗೆ ನಡೆದ ವಿಸ್ಮಯಗಳನ್ನು ರಾಜಕುಮಾರನು ನೆನೆಯುತ್ತ ಮುಂದೆ ಸಾಗುತ್ತಿರಲು ಅಲ್ಲಿ ಗೋವ್ರಜವೂ, ನಗರ ನಿವಾಸಿಗಳೂ ಬೆದರಿ ಓಡುತ್ತಿರುವುದನ್ನು ಕಂಡು ಕಾರಣವನ್ನು ವಿಚಾರಿಸುತ್ತಾನೆ.

'ಆ ನಗರಿಯು ಅರಿಂಜಯನಾಡಿನ ವಿಪುಳ ಎಂಬ ರಾಜಧಾನಿ. ರಾಜರಾಣಿಯರು ಜಯವರ್ಮ ಮತ್ತು ಜಯಶ್ರೀ. ಮಗಳು ರೂಪವತಿಯಾದ ಶಶಿಪ್ರಭೆ. ಅವಳ ರೂಪಕ್ಕೆ ಮನಸೋತ ಮಹೇಂದ್ರನೆಂಬ ರಾಜನಿಗೆ, ಮಗಳನ್ನು ಕೊಡಲು ಜಯವರ್ಮ ಮೊದಲು ಸಮ್ಮತಿಸಿದ್ದರೂ, ಆತನನ್ನು ಅಲ್ಪಾಯುವೆಂಬ ಕಾರಣದಿಂದ ತಿರಸ್ಕರಿಸಲು ಕುಪಿತನಾದ ಮಹೇಂದ್ರ ವಿಪುಳನಗರಕ್ಕೆ ಮುತ್ತಿಗೆ ಹಾಕಿರುತ್ತಾನೆ' ಎಂಬ ವಿಚಾರವನ್ನು ತಿಳಿದ ಅಜಿತಸೇನ ಸಂದರ್ಭೋಚಿತವಾಗಿ ಮಹೇಂದ್ರನನ್ನು ಯುದ್ಧದಲ್ಲಿ ಕೊಂದು ರಾಜ ಮತ್ತು ಪ್ರಜೆಗಳ ಪ್ರೀತಿಯನ್ನು ಸಂಪಾದಿಸುತ್ತಾನೆ. ಮುಂದೆ, ರಾಜಕುಮಾರ ಅಜಿತಸೇನ, ರಾಜಕುಮಾರಿ ಶಶಿಪ್ರಭೆಯರು ಪರಸ್ಪರ ಅನುರಕ್ತರಾಗುತ್ತಾರೆ. ಇದು ರಾಜನಿಗೆ ತಿಳಿದು ಸಂತೋಷದಿಂದ ವಿವಾಹಕ್ಕೆ ಏರ್ಪಾಡು ಮಾಡುತ್ತಾನೆ.

ಈ ಮಧ್ಯದಲ್ಲಿ ಆದಿತ್ಯಪುರದ ರಾಜನಾದ ಧರಣೀಧ್ವಜನಿಗೆ ಕ್ಷುಲ್ಲಕ ಮುನಿಯೊಬ್ಬನಿಂದ ಈ ವಿಚಾರ ತಿಳಿಯುತ್ತದೆ. ಅಷ್ಟಲ್ಲದೆ

ಆ ರಾಜಕುಮಾರನು ತನ್ನನ್ನೂ ಯುದ್ಧದಲ್ಲಿ ಸಾಧಿಸಿ ರಾಜ ಕುಮಾರಿಯನ್ನು ಮದುವೆಯಾಗುತ್ತಾನೆಂದು ಧರಣೀಧ್ವಜನಿಗೆ ತಿಳಿಯುತ್ತದೆ. ಈ ವಿವಾಹಕ್ಕೆ ಧರಣೀಧ್ವಜನು ಆಕ್ಷೇಪಣೆಯೊಡ್ಡಿ ಜಯವರ್ಮನೊಡನೆ ಯುದ್ಧ ಮಾಡಲು ಬರುತ್ತಾನೆ. ಆತನನ್ನು ಎದುರಿಸಿದ ರಾಜಕುಮಾರ ಅಜಿತಸೇನನಿಂದ ಯುದ್ಧದಲ್ಲಿ ಹತ ನಾಗುತ್ತಾನೆ. ವಿವಾಹವು ಸಂಭ್ರಮದಿಂದ ನೆರವೇರುತ್ತದೆ.

ಅಜಿತಸೇನನಿಗೆ ತನ್ನ ಊರು ಮತ್ತು ತಂದೆತಾಯಿಗಳ ನೆನಪಾಗಿ ಊರಿಗೆ ಹಿಂದಿರುಗಲು ನಿಶ್ಚಯಿಸುತ್ತಾನೆ. ಜಯವರ್ಮ ಅಳಿಯನಲ್ಲಿ ಸೂಕ್ತ ಬಿನ್ನಹಮಾಡಿ ಮಗಳಿಗೆ ಸೂಕ್ತ ಆದೇಶನೀಡಿ ಇಬ್ಬರನ್ನೂ ಆಶೀರ್ವದಿಸಿ ಕಳುಹಿಸಿಕೊಡುತ್ತಾನೆ.

ಊರಿನಲ್ಲಿ ಮಗನ ಆಗಮನದ ಸುದ್ದಿಯನ್ನು ತಿಳಿದ ಅಜಿತಂಜಯ ಮಹಾರಾಜನು, ಮಗ, ಸೊಸೆ ಇಬ್ಬರನ್ನೂ ಸಂಭ್ರಮದಿಂದ ಬರಮಾಡಿಕೊಳ್ಳುತ್ತಾನೆ. ಮಗನು ಅಪಹೃತ ವಾದಂದಿನಿಂದ ಅಂದಿನವರೆಗಿನ ವಿಷಯವೆಲ್ಲವನ್ನೂ ಮಗನಿಂದ ಕೇಳಿ ರಾಜದಂಪತಿಗಳು ಸಂತೋಷಿಸುತ್ತಾರೆ. ಕಾಲಕ್ರಮದಲ್ಲಿ ತಮ್ಮ ತಮ್ಮ ದೈನಂದಿನ ವ್ಯಾಪಾರದಲ್ಲಿ ಎಲ್ಲರೂ ನಿರತರಾಗುತ್ತಾರೆ.

ಕೆಲವು ದಿನಗಳು ಕಳೆದ ಬಳಿಕ ಆಯುಧಾಗಾರದಲ್ಲಿ ಚಕ್ರ ರತ್ನವು ಉದಯಿಸುತ್ತದೆ. ತಂದೆಯು ಮಗನ ಪುಣ್ಯಕ್ಕೆ ಆನಂದಿಸಿ 'ನಿನ್ನ ಪುಣ್ಯಫಲದಿಂದ ಚಕ್ರೋದಯ ಉಂಟಾಗಿದೆ. ಅದನ್ನು ಅರ್ಚಿಸಿ ರಾಜ್ಯಲಕ್ಷ್ಮಿಯನ್ನು ಅಭಿವೃದ್ಧಿಪಡಿಸು ಎಂದು ಸೂಚನೆಯನ್ನು ಕೊಡುತ್ತಾನೆ. ತಂದೆಯ ಮನೋಗತವನ್ನರಿತ ರಾಜಕುಮಾರನು, ಜಿನರಾಜ ಮಂದಿರಕ್ಕೆ ಬಂದು ಪರಮಜಿನ ರಾಜನನ್ನು ಭಕ್ತಿಯಿಂದ ಪೂಜಿಸಿ ಅರಮನೆಗೆ ಹಿಂದಿರುಗುತ್ತಾನೆ. ತನ್ನ ಪುಣ್ಯಫಲದಿಂದ ಉದಯಿಸಿದ ಸುದರ್ಶನ ಚಕ್ರರತ್ನದಾದಿ

ಯಾಗಿ, ಏಳು ಆಯುಧ ರತ್ನಗಳನ್ನೂ, ಏಳು ಜೀವರತ್ನಗಳನ್ನೂ, ಒಂಬತ್ತು ನಿಧಿಗಳನ್ನೂ ಪೂಜಿಸಿ ಅವನ್ನು ಸ್ವೀಕರಿಸಿ, ಪಟ್ಟಾಭಿಷಿಕ್ತ ನಾಗಿ ಸಾರ್ವಭೌಮ ಪದವಿಯನ್ನು ಪಡೆಯುತ್ತಾನೆ. ತಂದೆಯು ಮಗನಿಗೆ ಅಧಿಕಾರ ವಹಿಸಿ ನಿಶ್ಚಿಂತೆಯಿಂದಿರುತ್ತಾನೆ.

ಅಜಿತಸೇನನು ರಾಜ್ಯಭಾರ ಮಾಡುತ್ತಿರುವಾಗ ಒಂದು ದಿನ ಸ್ವಯಂಪ್ರಭನೆಂಬ ಜಿನಮುನಿ ಬಂದು ಧರ್ಮಾಮೃತ ಸಾರವನ್ನು ತಿಳಿಸುತ್ತಾನೆ. ಅದನ್ನು ಕೇಳಿದ ಅಜಿತಂಜಯನು ಆ ಮುನಿ ಶ್ರೇಷ್ಠ ನನ್ನು ಅರ್ಚಿಸಿ, ಅವನಲ್ಲಿ ಜಿನತತ್ವಗಳನ್ನು ಚರ್ಚಿಸಿ ಅರಿವು ಪಡೆದು ವಿರಕ್ತಿ ಹೊಂದಿ, ದಿಗಂಬರ ಜಿನದೀಕ್ಷೆಯನ್ನು ಸ್ವೀಕರಿಸುತ್ತಾನೆ.

ಅಜಿತಸೇನನು, ಕೆಲವು ದಿವಸಗಳಲ್ಲೇ ತನ್ನ ರಾಜ್ಯವನ್ನು ಹಿಮಾದ್ರಿಯಿಂದ ಲವಣಸಮುದ್ರದವರೆಗೆ ವಿಸ್ತರಿಸಿ ಕಡಲತಡಿ ಯಲ್ಲಿ ಈತನು ನೆಡಿಸಿದ ಕಾಂಚನ ಜಯಸ್ತಂಭ ಸ್ವರ್ಗಕ್ಕೆ ಈತನ ಯಶಸ್ಸನ್ನು ಕೊಂಡೊಯ್ಯುವಂತೆ ಮಾಡುತ್ತಾನೆ. ಆಗ 'ನವ ಪುಷ್ಪೋತ್ಕರ ಪಾಂಡುಚೂತ ನಿವಹ'ದೊಡನೆಯೂ 'ಭೃಂಗವಧೂ ಝಂಕೃತಿ'ಯೊಡನೆಯೂ ಋತು ಸಾರ್ವಭೌಮ ವಿಭವನಾದ ವಸಂತನು ಆಗಮಿಸುತ್ತಾನೆ. ಚಕ್ರವರ್ತಿಯು, ವನವಿಹಾರಕ್ಕೆ ಹೋಗಿಬರುತ್ತಾನೆ. ಅಂತೆಯೇ ಚಕೋರನಂತೆ ಚಂದ್ರಿಕಾ ವಿಹರಣ ವಿನೋದವನ್ನೂ ಅನೇಕ ನಾಯಕರುಗಳೊಡನೆ ವೇಶ್ಯಾ ವಾಟಿಕೆಯನ್ನೂ ಸುತ್ತಾಡಿ ಅಚಂಚಲಿತ ಮನಸ್ಕನಾಗಿ ಹಿಂತಿರುಗಿ, ಶಶಿಪ್ರಭೆಯೊಡನೆ ಸುಖದಿಂದಿರುತ್ತಾನೆ.

ಒಮ್ಮೆ ಅಜಿತಸೇನ ಚಕ್ರವರ್ತಿಯು ಯಾದೃಚ್ಛಿಕವಾಗಿ ಕ್ಷೀಣಗತಿಯಲ್ಲಿರುವ ಚಂದ್ರಮಂಡಲವನ್ನು ನೋಡುತ್ತಾನೆ. 'ಅಂತು ವಾಸರೇಂದು ದರ್ಶನದಿಂದ ವೈರಾಗ್ಯ ಸಾಗರ ವೃದ್ಧಿಯು' ಪಡೆದು, ಈ ಜಗತ್ತೂ ಅದರಂತೆಯೇ ಅನಿಶ್ಚಿತ ಎಂದು ಬಗೆದು ಚಿಂತೆಗೊಳಗಾಗುತ್ತಾನೆ.

ಆ ವೇಳೆಗೆ ವನಪಾಲಕನು ಬಂದು ಶಿವಂಕರ ಉದ್ಯಾನಕ್ಕೆ ಗಂಣಪ್ರಭ ಎಂಬ ಯತಿಶ್ರೇಷ್ಠರು ಬಂದಿರುವುದನ್ನು ತಿಳಿಸುತ್ತಾನೆ. ಮನಃಶಾಂತಿ ಬಯಸುತ್ತಿದ್ದ ಚಕ್ರವರ್ತಿಗೆ ಸಂತೋಷವಾಗಿ, ಪರಿವಾರಸಮೇತ ಅಲ್ಲಿಗೆ ಹೋಗುತ್ತಾನೆ. ಅವರಿಗೆ "ನೀವಿಂದೆ ಡೆಗೇಟ್ಟುಂದಪೆನೆಂದಿರೆ ನಿಮ್ಮನೆ ತಂದತ್ತಿಲ್ಲಿಗೆ. ಪುರಾಕೃತಂ ಮತ್ಸು ಕೃತಂ" ಎಂದು ತಿಳಿಸಿ, ತನ್ನ ಸಂಕೃತಕ್ಕೆ ಸಂತೋಷಿಸಿ, ಅವರನ್ನು ಮೂರುಬಾರಿ ಬಲವಂದು "ಪರಮ ದಯಾನಿಧಿಗಳಾದ ತಾವು ಜಿನದೀಕ್ಷೆಯನ್ನು ವಿಸ್ತರಿಸಬೇಕು" ಎಂದು ಕೇಳಿಕೊಳ್ಳುತ್ತಾನೆ. "ಸಂಸಾರಭಯದಿಂದ ದೀನನಾಗಿರುವ ನನ್ನನ್ನು ತಾವು ಉದ್ಧರಿಸ ಬೇಕು" ಎಂದು ಕೇಳಿಕೊಂಡು, ಜಿತಶತ್ರುವೆಂಬ ತನ್ನ ಮಗನಿಗೆ ರಾಜ್ಯಭಾರವನ್ನು ವಹಿಸಿ ಆ ಮುನಿಶ್ರೇಷ್ಠರಿಂದ ಜಿನದೀಕ್ಷೆ ಪಡೆಯುತ್ತಾನೆ. ಸುತ, ಯುವತಿ, ಜ್ಞಾತಿಗಳೆಂಬ ವ್ಯಾಮೋಹ ರೂಪ ಶಿಶಿರದಿಂದ ಕೊರಗಿದ್ದ ಅಜಿತಸೇನನ ಮುಖಾಬ್ಜ, ತಪಃ ಪ್ರಭಾವವೆಂಬ ಆ ತಪದಿಂದ ಶೋಭಿಸುತ್ತದೆ. ಆಯುರಂತ್ಯದಲ್ಲಿ ನಭಸ್ತಿಲಕಾಚಲಕ್ಕೆ ಬಂದು ಪ್ರಾಯೋಪಗಮನದಿಂದ ಅವಸಾನ ಹೊಂದಿ ಹದಿನಾರನೆಯ ಅಚ್ಯುತಕಲ್ಪದಲ್ಲಿ ಹುಟ್ಟಿ ಮುನ್ನೂರೈವತ್ತು ವಿಮಾನಗಳಿಗೆ ಒಡೆಯನಾಗುತ್ತಾನೆ.

ಹೀಗಿರಲು, ಒಮ್ಮೆ ತಾನು ಧರಿಸಿದ್ದ ಪುಷ್ಪಮಾಲೆ ಬಾಡುವುದನ್ನು ಕಂಡು ಆಯುರವಸಾನ ಸನ್ನಿಹಿತವಾಗಿರುವುದನ್ನು ಅರಿಯುತ್ತಾನೆ. ಆದರೂ "ನಿಜಕುಸುಮಸ್ರಜಂ ಕೊರಗಿದತ್ತು ಮೊಗಂ ಕೊರಗಿತ್ತೆ, ಭೂಷಣವ್ರಜ ರುಚಿಸಂಚಯಂ ತೊಲಗಿದತ್ತು ಅಚಿತಂ ತೊಲಗಿತ್ತೆ..." ಎಂದು ಸುರರು ಅಚ್ಚರಿಪಡುವಂತೆ ಜಿನೇಂದ್ರ ಪದಕಮಲಗಳನ್ನು ಸ್ಮರಿಸುತ್ತ, ಸಮಾಧಿ ವಿಧಾನದಿಂದ ಮೃತನಾಗಿ ಭೂಲೋಕದಲ್ಲಿ ರತ್ನಸಂಚಯಪುರದ ರಾಜ ಕನಕ

ಪ್ರಭ, ರಾಣಿ ಸುವರ್ಣಮಾಲೆಯರಿಗೆ ಪದ್ಮನಾಭನೆಂಬ ಮಗನಾಗಿ ಹುಟ್ಟುತ್ತಾನೆ. ಒಮ್ಮೆ ಶ್ರೀಧರ ಮುನಿಗಳಿಂದ ತನ್ನ ಪೂರ್ವಭವವನ್ನು ತಿಳಿಯುತ್ತಾನೆ. ಮುಂದೇನಾಗುತ್ತದೆಯೆಂದು ಮುನಿಗಳನ್ನು ಕೇಳಲು, ಅವರು, ಮುಂದೆ ಆ ವರ್ಷದಲ್ಲಿ ಅತ್ಯಂತ ಬೇಗೆಯಿಂದ ಕೂಡಿದ ಗ್ರೀಷ್ಮಋತು ಸಂಭವಿಸುವುದೆಂದೂ, ಆ ಸಮಯದಲ್ಲಿ ಒಂದು ಮದಗಜವು ಊರಿಗೆ ಬರುವುದೆಂದೂ, ಆ ಮದಗಜವನ್ನು ಕಂಡಬಳಿಕ ಮುನಿ ತಿಳಿಸಿದ ಉಳಿದ ವಿಚಾರಗಳೂ ನಿಜವಾಗುವುದೆಂಬ ನಂಬಿಕೆ ಬರುವುದೆಂದೂ ತಿಳಿಸುತ್ತಾರೆ.

ಕಾಲಕ್ರಮದಲ್ಲಿ ಗ್ರೀಷ್ಮಋತು ಬರುತ್ತದೆ. ತಾಪ ಅತ್ಯಧಿಕವಾಗಿ ಆನೆಗಳ ಗುಂಪು ನೀರಿಗಾಗಿ ಬಳಲುತ್ತದೆ. ಶೈತ್ಯೋಪಚಾರ ಮಾಡಿಸಿಕೊಳ್ಳುತ್ತಿದ್ದ ಪದ್ಮನಾಭನಿಗೆ ಇದ್ದಕ್ಕಿದ್ದಂತೆ ಪೌರಜನ "ಪುಗು ಪುಗು ಪೋಗು ಪೋಗಡರಡರ್ ಗೃಹಕೂಟ ಮನಕ್ಕಟಕ್ಕಟಾ ತೆಗೆತೆಗೆ ಮಕ್ಕಳಂ ಬಿಡದೆ ಕೂಗಿಡು...." ಮುಂತಾದ ಅಬ್ಬರದ ದನಿ ಕೇಳಿಸುತ್ತದೆ. ಅದೇನೆಂದು ಆತನು ವಿಚಾರಿಸಲು ಒಂದು ಮದಿಸಿದ ಆನೆ ನಗರಿಗೆ ಬಂದು ತನಗೆ ಸಿಕ್ಕಿದ ಜೀವಾವಳಿಯನ್ನು ಕೊಲ್ಲುತ್ತಿರುವ ವಿಚಾರ ತಿಳಿಯುತ್ತದೆ. ಕೂಡಲೇ ತಾನು ಹೋಗಿ ಅದರ ಆಟೋಪವನ್ನು ಶಮನಗೊಳಿಸಿ, ಅದರ ಮೇಲೆ ಹತ್ತಿ ಕುಳಿತು ಗಜಶಾಲೆಗೆ ತಂದು ಅದನ್ನು ಕಟ್ಟಿಸಿ ಪೌರಜನರನ್ನು ಅಚ್ಚರಿಗೊಳಿಸುತ್ತಾನೆ.

ಆ ವೇಳೆಗೆ ಪೃಥ್ವೀಪಾಲನೆಂಬ ರಾಜದೂತನೊಬ್ಬನು ಬಂದು ಆನೆಯನ್ನು ತನಗೆ ಹಿಂತಿರುಗಿಸುವಂತೆ ರಾಜನನ್ನು ಕೇಳಲು ಪದ್ಮನಾಭನು ಆತನ ಗರ್ವಕ್ಕೆ ನಸುನಕ್ಕು, ಆತನನ್ನು ಹಿಂದಕ್ಕೆ ಕಳುಹಿಸುತ್ತಾನೆ. ಯುದ್ಧಾಪೇಕ್ಷಿಯಾದ ಪೃಥ್ವೀಪಾಲನು ಪದ್ಮನಾಭನೊಡನೆ ಯುದ್ಧಮಾಡಿ ಶಿರಶ್ಛೇದನ ಹೊಂದಿ ಸಾಯು

ತ್ತಾನೆ. ಅನಂತರ, ತಾನು ಛೇದಿಸಿದ ಶಿರಸ್ಸನ್ನು ನೋಡಿ ನಿರ್ವಿಣ್ಣ ಗೊಂಡು ತನ್ನ ಮಗ ಮತ್ತು ಪೃಥ್ವೀಪಾಲನ ಮಗ ಇಬ್ಬರಿಗೂ ಅವರವರ ರಾಜ್ಯದಲ್ಲಿ ಪಟ್ಟ ಕಟ್ಟಿಸಿ, ಬಳಿಕ, ಪಂಚಮಹಾವ್ರತ, ಹನ್ನೆರಡು ವಿಧ ತಪಸ್ಸು, ಪ್ರಾಯೋಪವೇಶಗಳಿಂದ ಪ್ರಾಣ ತೊರೆದು ವೈಜಯಂತ ವಿಮಾನದಲ್ಲಿ ಪದ್ಮನಾಭಚರನೆಂಬ ಅಹಮಿಂದ್ರನಾಗಿ ಹುಟ್ಟಿ ಸೌಖ್ಯದಿಂದಿರುತ್ತಾನೆ.

ಜಂಬೂ ದ್ವೀಪದ ಭರತಖಂಡದ ಪೂರ್ವಭಾಗದಲ್ಲಿ ಚಂದ್ರಪುರವೆಂಬ ನಗರ ಪ್ರಸಿದ್ಧವಾಗಿತ್ತು. ತೆಂಗು-ಕಬ್ಬು, ಕೋಟೆ-ಕೊತ್ತಲ, ಮಣಿಗೃಹ, ಚೈತ್ರಗೃಹಗಳಿಂದ ಕೂಡಿ, ಎಂಟನೆಯ ತೀರ್ಥಂಕರನಿಗೆ ಜನ್ಮ-ಭೂಮಿಯಾಗಲು ಸಮರ್ಥ ವಾಗಿತ್ತು. ತೀರ್ಥಂಕರನ ಜನ್ಮಕಲ್ಯಾಣೋತ್ಸವಕ್ಕಾಗಿಯೇ ದೇವ ವಿಮಾನಗಳು ಬಂದು ನೆಲಸಿದಂತಿದ್ದುವು ಅಲ್ಲಿಯ ಗೃಹಗಳು. ಆ ನಗರಿಯ ರಾಜ ಮಹಾಸೇನ, ರಾಣಿ ರೂಪವತಿಯಾದ ಲಕ್ಷ್ಮಣಾದೇವಿ.

ದೇವರದೇವನು, ಅಣೂತ್ತರೆಯಿಂದ ಇಳಿದು ಲಕ್ಷ್ಮಣಾ ದೇವಿಯ ಗರ್ಭದಲ್ಲಿ ನೆಲಸುತ್ತಾನೆಂಬ ವಿಚಾರ, ಆರುತಿಂಗಳು ಮೊದಲಿನಲ್ಲೇ ಅವಧಿ ಜ್ಞಾನದಿಂದ ಇಂದ್ರನಿಗೆ ತಿಳಿದು, ಅವನ ಆದೇಶದಂತೆ ಸೂಕ್ತಕಾಲದಲ್ಲಿ ಅಮರಿಯರು ರಾಣಿಯ ಗರ್ಭ ಶೋಧನೆ ಮಾಡುತ್ತಾರೆ. ರಾಣಿ ದಿವ್ಯವಸ್ತ್ರವನ್ನು ಧರಿಸಿ, ದಿವ್ಯಭೂಷಣವನ್ನು ತೊಟ್ಟು, ದಿವ್ಯಪುಷ್ಪಗಳನ್ನು ಮುಡಿದು, ದಿವ್ಯಾನ್ನವನ್ನುಂಡು, ದಿವ್ಯಾಂಗಿಯಾಗುತ್ತಾಳೆ. ಪುಷ್ಪವತಿಯಾಗಿ ನಾಲ್ಕು ನೀರು ಮಿಂದ ಬಳಿಕ ಅಮರಾಂಗನೆಯರು ಅಲಂಕರಿಸಿದ ಸೆಜ್ಜೆವನೆಯಲ್ಲಿ ಮಹಾಸೇನ ನೃಪತಿಯೊಡನೆ ಆ ರಾತ್ರಿಯನ್ನು ಕಳೆಯುತ್ತಾಳೆ. ಬೆಳಗಿನ ಝಾವದಲ್ಲಿ ಗಜೇಂದ್ರ, ವೃಷಭ, ಸಿಂಹ,

ಕೈಗಳಲ್ಲಿ ಕಮಲವನ್ನು ಧರಿಸಿದ ಲಕ್ಷ್ಮಿ ಇತ್ಯಾದಿ ಹದಿನಾರು ಸ್ವಪ್ನಗಳನ್ನು ತಾನು ಕಂಡು ಅದನ್ನು ರಾಜನಿಗೆ ಅರುಹುತ್ತಾಳೆ. ರಾಜನು, ಜಿನನು ಆಕೆಯ ಗರ್ಭದಲ್ಲಿ ಜನಿಸುತ್ತಾನೆ ಎಂಬ ಸ್ವಪ್ನ ಫಲವನ್ನು ಆಕೆಗೆ ತಿಳಿಸುತ್ತಾನೆ.

ಪದ್ಮನಾಭಚರ ಅಹಮಿಂದ್ರನು, ವೈಜಯಂತ ವಿಮಾನದಲ್ಲಿ ಮೂವತ್ತುಮೂರು ಆಯುರಬ್ಧಿಗಳನ್ನು ಕಳೆದು ಚೈತ್ರಮಾಸ ಕೃಷ್ಣಪಕ್ಷ ಪಂಚಮಿ ಶ್ರವಣ ನಕ್ಷತ್ರ ಕೂಡಿದ ಶುಭದಿನದಲ್ಲಿ ಚಂದ್ರಮಂಡಳಾಕಾರದಿಂದ ಲಕ್ಷ್ಮಣಾದೇವಿಯ ಮುಖ ಮುಕುರದ ಮೂಲಕ ಆಕೆಯ ಗರ್ಭದಲ್ಲಿ ಬಂದು ನೆಲಸುತ್ತಾನೆ, ದಿವ್ಯಾಂಗನೆಯರ ಸೇವೆಯೊಡನೆ ನವಮಾಸ ಕಳೆದು ಪುಷ್ಯಮಾಸ ಶುಕ್ಲಪಕ್ಷ ಏಕಾದಶೀ ರೋಹಿಣೀ ನಕ್ಷತ್ರ ಶುಕ್ಲಯೋಗದಿಂದ ಕೂಡಿದ ಶುಭದಿವಸದಲ್ಲಿ ಚಂದ್ರಪ್ರಭನು ಜನಿಸುತ್ತಾನೆ.

ಆಗ, ಚಂದ್ರಪುರದಲ್ಲಿ ಅಕಾಲದಲ್ಲಿ ಫಲ ಪುಷ್ಪಗಳು ಹುಟ್ಟುತ್ತವೆ. ದೇವ ದುಂದುಭಿ ಮೊಳಗುತ್ತದೆ. ಪುಷ್ಪವೃಷ್ಟಿಯಾಗುತ್ತದೆ. ಇಂದ್ರನಿಗೆ ಆಸನಕಂಪನವಾಗುತ್ತದೆ. ಅವಧಿ ಜ್ಞಾನದಿಂದ ಅಷ್ಟಮ ಜಿನನ ಜನನವನ್ನರಿತ ಸೌಧರ್ಮೇಂದ್ರನು ಶಚಿಯೊಡನೆ ಐರಾವತದ ಮೇಲೆ, ಎರಡನೆಯ ಕಲ್ಯಾಣ ವೈಭವವನ್ನಾಚರಿಸಲು ಬರುತ್ತಾನೆ.

ಇಂದ್ರನ ಅಪ್ಪಣೆಯಂತೆ ಶಚಿಯು ಮಾಯಾಶಿಶುವನ್ನಿರಿಸಿ ಜಿನಶಿಶುವನ್ನು ತರುತ್ತಾಳೆ. ಇಂದ್ರನು ಆ ಪರಮನ ಪದ ಸರಸಿಜವನ್ನು ತಲೆ, ಹಣೆ, ಎದೆಗಳಲ್ಲಿ ಧರಿಸಿ ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳುತ್ತಾನೆ. ಸಂರವೃಂದದೊಡನೆ ಆಕಾಶ ಮಾರ್ಗದಿಂದ ಮಂಧರ ಪರ್ವತಕ್ಕೆ ಎಲ್ಲರೂ ಬರುತ್ತಾರೆ. ದಿವಿಜರು ಸಿದ್ಧಪಡಿಸಿದ್ದ ಮಜ್ಜನ ಮಂಟಪದಲ್ಲಿ ಜಿನಶಿಶುಗೆ ಕ್ಷೀರಾಭಿಷೇಕ

ವಾಗುತ್ತದೆ. ಸುರ ಸಮಿತಿ ಜಿನಸವನ ಗಂಧೋದಕವನ್ನು ತಲೆಯಲ್ಲಿ ಧರಿಸಿ ಕೃತಾರ್ಥವಾಗುತ್ತದೆ. ಅನಂತರ, ಗಂಧ, ಪುಷ್ಪ, ಧೂಪ, ದೀಪಗಳಿಂದ ಜಿನನನ್ನು ಇಂದ್ರನು ಪೂಜಿಸಿ ಆಕಾಶ ಮಾರ್ಗದಿಂದ ಮತ್ತೆ ಚಂದ್ರಪುರಕ್ಕೆ ಕರೆತರುತ್ತಾನೆ. ರಾಜ ಮಂದಿರದ ಮಣಿಮಂಟಪದಲ್ಲಿ ಜಿನಾರ್ಭಕನನ್ನು ಕುಳ್ಳಿರಿಸಿ, ಉತ್ಸುಕತೆಯಿಂದ ಬಂದ ರಾಜದಂಪತಿಗಳನ್ನೂ ಉಚಿತಾಸನದಲ್ಲಿ ಕುಳ್ಳಿರಿಸಿ, ಅವರನ್ನೂ ಸ್ತುತಿಸಿ, ಪೂಜಿಸಿ, ಜನ್ಮಾಭಿಷೇಕ ಕ್ರಮವನ್ನು ವಿಸ್ತರಿಸುತ್ತಾನೆ. ಶಿಶುವಿಗೆ ಜಾತಕರ್ಮೋತ್ಸವ ನಡೆಸಿ ಆ ಎಂಟನೆಯ ಜಿನ ಶಿಶುವಿಗೆ 'ಚಂದ್ರಪ್ರಭ'ನೆಂದು ನಾಮಕರಣ ಮಾಡಿ, ಇಂದ್ರ, ಶಚಿ ಮತ್ತು ದೇವತೆಗಳು ನಿಜ ನಿವಾಸಕ್ಕೆ ಹಿಂತಿರುಗುತ್ತಾರೆ.

ಕಾಲಕ್ರಮದಲ್ಲಿ ಚಂದ್ರಪ್ರಭನು ರಜಸ್ತಮೋಗುಣಗಳನ್ನು ಎರಡುಕಾಲುಗಳಿಂದ ಮೆಟ್ಟುವಂತೆ, ನಡೆಯಲು ಪ್ರಾರಂಭಿಸುತ್ತಾನೆ. ತಾಯಿತಂದೆಗಳನ್ನು ಸಂತೋಷಪಡಿಸುತ್ತ ಸದ್ಗುಣ, ಸಚ್ಚಾರಿತ್ರ್ಯಗಳಿಂದ ಎಲ್ಲರೂ ವಿಸ್ಮಯಪಡುವಂತೆ ನಡೆದು, ನವ ಯೌವನಕ್ಕೆ ಕಾಲಿಡುತ್ತಾನೆ.

ಮದುವೆಗೆ "ಅಪ್ರತಿಷಿದ್ಧಂ ಅನುಮತಂ ಭವತಿ" ಎನ್ನುವಂತೆ ಪ್ರತಿಷೇಧವಿಲ್ಲದೆ ಪಿತೃ ದ್ವಯಾಭಿವಾಂಛೆಯನ್ನು ಕಮಲ ಪ್ರಭೆಯ ಪಾಣಿಗ್ರಹಣದಿಂದ ಪೂರ್ಣಗೊಳಿಸುತ್ತಾನೆ. ಇಂದ್ರ, ಸುರಕಾಂತೆಯರು ಈ ಸಂಭ್ರಮದಲ್ಲಿ ಪಾಲ್ಗೊಳ್ಳುತ್ತಾರೆ.

ರಾಜಕುಮಾರನಿಗೆ ರಾಜ್ಯಾಭಿಷೇಕವಾಗಿ ಅಮಲಚರಿತ್ರನಾಗುತ್ತಾನೆ. ಕಮಲಪ್ರಭೆಯಲ್ಲಿ ಹುಟ್ಟಿದ ಚಂದ್ರಕುಮಾರನಿಗೆ ಯೌವರಾಜ್ಯಾಭಿಷೇಕವಾಗುತ್ತದೆ. ಹೀಗೆ, "ಸಕಲ ಸಾಮ್ರಾಜ್ಯ ಲೀಲಾ ವಿಭವಕ್ಕಿದುವೆ ಸೀಮೆಯೆಂಬಂತೆಡ್ಡಮಾದ ಒಡ್ಡೋಲಗ"

ದಲ್ಲಿ ಎಲ್ಲರೂ ಕುಳಿತಿರಲು, "ಉಡುಂಗಿದುರದ, ತೂಪಸಿರದ, ಸೆರೆ ಪೊದಟ್ಟಿಮೆಯ್ಯ, ಕೋಲ್ವಿಡಿದ ಕೆಯ್ಯ, ತಲೆಯ ನರೆಯು, ಮೊಗದ ತೆರೆಯು......ಮುಪ್ಪಡಸಿದ" ಒಬ್ಬ ವ್ಯಕ್ತಿ ಬಂದು, "ಒಬ್ಬ ನಿಮಿತ್ತಜ್ಞನು ಬಂದು ತನಗೆ ಅಂದಿನಿರುಳು ಅಂತಕನ ಬಾಧೆ ತಪ್ಪುವುದಿಲ್ಲ"ವೆಂದು ತಿಳಿಸಿದನೆಂತಲೂ, ಅದಕ್ಕಾಗಿ ಚಂದ್ರಪ್ರಭ ರಂತಹ ಬಲಿಷ್ಠರ ಮೊರೆಹೊಕ್ಕರೆ ಆ ಭಯ ತಪ್ಪುವುದೆಂದು ಭಾವಿಸಿ ಬಂದಿರುವುದಾಗಿ ತಿಳಿಸಿ ತಟ್ಟನೆ ಅದೃಶ್ಯನಾಗುತ್ತಾನೆ. ಅವಧಿಜ್ಞಾನದಿಂದ ಚಂದ್ರಪ್ರಭನು ಇದರ ಕಾರಣವನ್ನು ತಿಳಿದು, ವಿಸ್ಮಿತರಾದ ಸಭಾಸದರಿಗೆ,"ಸೌಧರ್ಮೇಂದ್ರನ ಆದೇಶದ ಮೇರೆಗೆ ಧರ್ಮರುಚಿ ಎಂಬುವನು ನನ್ನಲ್ಲಿ ವಿಷಯ ವಿರಕ್ತತೆಯನ್ನುಂಟು ಮಾಡಲು ಈ ರೀತಿ ಮಾಡಿದನು" ಎಂದು ತಿಳಿಸಿ ಅವರನ್ನು ಬೀಳ್ಕೊಟ್ಟು ಪರಮ ವೈರಾಗ್ಯವನ್ನು ತಾಳುತ್ತಾನೆ. ಆತನಿಗೆ ಮೋಕ್ಷಲಕ್ಷ್ಮಿಯಲ್ಲಿ ಅಭಿಲಾಷೆ ಹುಟ್ಟುತ್ತದೆ. ಆವೇಳೆಗೆ ಸಾರ ಸ್ವತ್ಯಾದಿತ್ಯ, ಮುಂತಾದ ಎಂಟುಮಂದಿ ಲೋಕಾಂತಿಕ ದೇವರು ಬಂದು ಚಂದ್ರಪ್ರಭನನ್ನು ಪೂಜಿಸುತ್ತಾರೆ. "ಅಷ್ಟಮ ತೀರ್ಥಂ ಕರತ್ವವನ್ನೂ, ಅಷ್ಟಮಹಾಪ್ರಾತಿಹಾರ್ಯವನ್ನೂ ಹೊಂದಿ ಅಷ್ಟ ವಿಧ ಕರ್ಮಜಯದಿಂದ ಅಷ್ಟಮ ಮಹಿಗೆ ಹೋಗಿ ಗುಣಾಷ್ಟಕದ ಒಳ್ಪನ್ನು ತಳೆದ ನಿಮ್ಮಂಥವರಿಂದ ನಾವು ತಿಳಿದುದನ್ನು, ಕೆರೆಯ ನೀರನ್ನು ಕೆರೆಗೆ ಚೆಲ್ಲುವಂತೆ ನಿಮಗೇ ಹೇಳುತ್ತಿದ್ದೇವೆ" ಎಂದು ಆತನನ್ನು ಪ್ರಬೋಧಿಸಿ ತಮ್ಮ ನಿವಾಸಕ್ಕೆ ತೆರಳುತ್ತಾರೆ.

ಚಂದ್ರಕುಮಾರನಿಗೆ ಪಟ್ಟಾಭಿಷೇಕವಾಗುತ್ತದೆ. ಇಂದ್ರನಿಗೆ ಚಂದ್ರಪ್ರಭನ ಪರಿನಿಷ್ಕ್ರಮಣ ಕಲ್ಯಾಣದ ವಿಚಾರ, ಅವಧಿ ಜ್ಞಾನ ದಿಂದ ತಿಳಿದು, ತಪೋರಾಜ್ಯಾಭಿಷೇಕವನ್ನು ಅಮರಿಯರೊಡಗೂಡಿ ನೆರವೇರಿಸುತ್ತಾನೆ.

ಶುಭಂಕರೋದ್ಯಾನದಲ್ಲಿ ಸಿದ್ಧವಾಗಿದ್ದ ಚಂದ್ರಕಾಂತಶಿಲೆಯ ಮಂಟಪದಲ್ಲಿ ಉತ್ತರಾಭಿಮುಖವಾಗಿ ಪರ್ಯಂಕಾಸೀನನಾಗಿ "ನಮಸ್ಸಿದ್ಧೇಭ್ಯಃ" ಎಂಬ ಮಂತ್ರವನ್ನುಚ್ಚರಿಸುತ್ತ, ನಿರ್ವಾಣನಾಗಿ ಪಂಚಮುಷ್ಟಿಯಿಂದ ಕೇಶರಾಶಿಯನ್ನು ಚಂದ್ರಪ್ರಭನು ಕೀಳುತ್ತಾನೆ.

ಷಷ್ಠೋಪವಾಸ, ದುರ್ಧರ ತಪಸ್ಸುಗಳನಂತರ ಚಂದ್ರಪ್ರಭ ಮುನಿ ಚರ್ಯೆಗೆ ನಳಿನಪುರಕ್ಕೆ ಹೊರಡುತ್ತಾನೆ. ಆ ನಗರಿಯ ರಾಜ ಸೋಮದತ್ತ ಆನಂದಿತನಾಗಿ ಮುನಿಯನ್ನರ್ಚಿಸಿ ಮೂರಾವರ್ತಿ ಆಹಾರವನ್ನು ಮುನಿಯ ಕರಪುಟದಲ್ಲಿ ನೀಡುತ್ತಾನೆ. ಮುನಿಯು ಹರಸಿ ಹೊರಡುವಾಗ ಪಂಚಾಶ್ಚರ್ಯಗಳಾಗುತ್ತವೆ.

ಚಂದ್ರಪ್ರಭಮುನಿ ಪುಣ್ಯಾರಣ್ಯಕ್ಕೆ ಹೋಗಿ ನಿರ್ಮಲ ಶಿಲಾತಲದ ಮೇಲೆ ಪ್ರತಿಮಾಯೋಗದಿಂದ ಕುಳಿತು ತಪಸ್ಸಿಗೆ ತೊಡಗುತ್ತಾನೆ. ಅಲ್ಲೆಲ್ಲ ಶಾಂತಿ, ಸ್ನೇಹಗಳು ನೆಲೆಸುತ್ತವೆ. ಒಂದು ತಿಂಗಳು ಕಳೆದು ಮುನಿಗೆ ಕೇವಲಜ್ಞಾನ ಮುಂತಾದ ಅಷ್ಟಋದ್ಧಿಗಳುಂಟಾಗುತ್ತವೆ. ಈ ಜ್ಞಾನಗಳಿಂದ ಕೂಡಿ ಮೂರು ತಿಂಗಳು ಛದ್ಮಸ್ಥನಾಗಿ ಕಳೆದು ಸುಬೋಧಲಬ್ಧಕ್ಕಾಗಿ ಶುಭಂಕರೋದ್ಯಾನಕ್ಕೆ ಬರುತ್ತಾನೆ. ಅಲ್ಲಿ ಹಾಸುಗಲ್ಲಿನ ಮೇಲೆ ಪರ್ಯಂಕಾಸನದಲ್ಲಿ ಮಂಡಿಸಿ ಧ್ಯಾನೋನ್ಮುಖನಾಗುತ್ತಾನೆ. ಫಾಲ್ಗುನಮಾಸ ಕೃಷ್ಣಪಕ್ಷ ಸಪ್ತಮಿ ಅನೂರಾಧ ನಕ್ಷತ್ರದಂದು ಚಂದ್ರಪ್ರಭಮುನಿಗೆ ಕೇವಲಜ್ಞಾನೋದಯವಾಗುತ್ತದೆ. ಸಹಸ್ರಾರು ಸೂರ್ಯಪ್ರಭೆಯಿಂದ ಕೂಡಿದ ಆತನ ಪರಮೌದಾರಿಕ ಶರೀರ ಐನೂರು ಬಿಲ್ಲು ಎತ್ತರದ ಗಗನಕ್ಕೆ ನೆಗೆಯುತ್ತದೆ. ಇಂದ್ರನಿಗೆ ಆಸನಕಂಪನವಾಗಿ ಕುಬೇರನು ರಚಿಸಿದ್ದ ಸಮವಸರಣಮಂಟಪಕ್ಕೆ ಬಂದು ಉತ್ಸವದಲ್ಲಿ ಪಾಲುಗೊಂಡು ಚಂದ್ರಪ್ರಭ ಜಿನಮೂರ್ತಿಯನ್ನು ಅರ್ಚಿಸಿ ಆನಂದರಸವನ್ನು ಅನುಭವಿಸುತ್ತಾನೆ.

ಚಂದ್ರಪ್ರಭ ತೀರ್ಥಂಕರನ ಆಸ್ಥಾನ ಐದುಸಾವಿರ ಬಿಲ್ಲು ಪ್ರಮಾಣದ ಎತ್ತರದಲ್ಲಿ ಹನ್ನೆರಡು ಯೋಜನ ಅಳತೆಯ ವಿಸ್ತಾರದಲ್ಲಿ ಸಮವೃತ್ತಾಕಾರದಲ್ಲಿ ಇಂದ್ರನೀಲ ಶಿಲಾಮಯವಾಗಿ ಪ್ರಕಾಶಿಸುತ್ತದೆ. ಈ ರಮ್ಯಭೂಮಿಯಲ್ಲಿ ಹಸಿವು ಮತ್ತು ಬಾಯಾರಿಕೆಯ ಬಾಧೆ ಇಲ್ಲ. ಜಿನ ಸಭೆಯಲ್ಲಿ ಭವ್ಯರಲ್ಲದವರಿಗಾಗಲೀ ಕುದೃಷ್ಟಿಗಳಿಗಾಗಲೀ ಅವಕಾಶವಿಲ್ಲ.

ಆಗ ಇಂದ್ರನಿಂದ ಪ್ರೇರಿತನಾದ ಗಣಧರಾಗ್ರಣಿಯು ತತ್ವಸ್ವರೂಪವನ್ನು ಉಪದೇಶಿಸಬೇಕೆಂದು ಜಿನನನ್ನು ಪ್ರಾರ್ಥಿಸುತ್ತಾನೆ. "ತತ್ವವು, ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ, ಮೋಕ್ಷ" ಎಂದು ಏಳು ಪ್ರಕಾರದಲ್ಲಿರುವುದನ್ನೂ, ಭರತ ಕ್ಷೇತ್ರದಲ್ಲಿ ಧರ್ಮಭೂಮಿಯಲ್ಲಿ ಭವ್ಯರಿಗೆ ಸಂತೋಷ ಉಂಟಾಗುವಂತೆ ಜಿನ ಧರ್ಮಾಮೃತವನ್ನು ಜಿನನು ಬೋಧಿಸುತ್ತಾನೆ. ಧರ್ಮ ಚಕ್ರಾಧಿಪತ್ಯಕ್ಕೆ ಇದೇ ಜೈತ್ರಯಾತ್ರೆ ಎಂಬಂತೆ ಚಂದ್ರಪ್ರಭ ತೀರ್ಥಂಕರನು ಸಮವಸರಣ ವಿಹಾರಾರ್ಥವಾಗಿ ಸೌರಾಷ್ಟ್ರ, ಮಹಾರಾಷ್ಟ್ರ, ಕುಂತಲ, ಅವಂತಿ, ವಿದರ್ಭ, ಪಾಂಚಾಲ, ಕುರುಜಾಂಗಣ ಮೊದಲಾದ ದೇಶಗಳಲ್ಲಿ ಬೋಧಿಸುತ್ತ ಕೇವಳಿ ಕಾಲ ಒಂದು ತಿಂಗಳಿರುವಾಗ ಸಮ್ಮೇದ ಶೈಲಕ್ಕೆ ಬಂದು ಅತ್ಯಂತ ಪವಿತ್ರವಾದ ತಾಣದಲ್ಲಿ ಪರ್ಯಂಕಾಸನದಲ್ಲಿ ಉತ್ತರ ದಿಕ್ಕಿಗೆ ಅಭಿಮುಖವಾಗಿ ಕುಳಿತು ಫಾಲ್ಗುನ ಮಾಸ ಶುಕ್ಲಪಕ್ಷ ಸಪ್ತಮಿಯಂದಿನ ಅಪರಾಹ್ಣದಲ್ಲಿ, ಜ್ಯೇಷ್ಠಾ ನಕ್ಷತ್ರದಲ್ಲಿ, ನಿರಾಕಾರನೂ, ನಿತ್ಯನೂ, ನಿರಂಜನನೂ ಆಗಿ ಸಿದ್ಧ ಪದವಿಯನ್ನು ಪಡೆಯುತ್ತಾನೆ.

ಈ ಪರಿನಿರ್ವಾಣೋತ್ಸವವನ್ನು ಅಮರವೃಂದ ನೋಡಿ ಆನಂದಿಸುತ್ತದೆ. ಇಂದ್ರನು ಈ ಕ್ಷೇತ್ರವನ್ನು ಮೂರುಸಲ

ಪ್ರದಕ್ಷಿಣೆ ಮಾಡಿ ಪೂಜಿಸಿ ಜಯಕಾರ ಮಾಡುತ್ತಾನೆ. ಪೂಜಾ ನಂತರ, ತನ್ನ ಪರಿವಾರದೊಡನೆ ನಾಟ್ಯವಾಡುತ್ತಾನೆ. ಬಳಿಕ ಸಕಲದೇವ ಸಮೂಹವೂ ತಮ್ಮ ಮಂದಿರಕ್ಕೆ ತೆರಳುತ್ತದೆ.

"ಚಂದ್ರಪ್ರಭ ಚರಿತಮುನ್ನಾ
ಚಂದ್ರಾರ್ಕ ಸ್ಥಾಯಿಯಿಂತಿದೆನೆ ಪೇೞ್ದು ಶರ
ಚ್ಚಂದ್ರೋಜ್ವಳ ಕೀರ್ತಿಗೆ ಸುಕ
ವೀಂದ್ರಂ ನೆಲೆಯಾದನಾದಮಗ್ಗಳದೇವಂ"

ಇದು ಚಂದ್ರಪ್ರಭ ಪುರಾಣದ ಕಥಾಸಾರ.

## ಚಂದ್ರಪ್ರಭ ಪುರಾಣ ಕಾವ್ಯದಲ್ಲಿ ಪಾತ್ರ ಚಿತ್ರಣ

ಚಂದ್ರಪ್ರಭ ಪುರಾಣದಂತಹ ಜೈನ ಪುರಾಣಗಳನ್ನು ರಚಿಸು ವಾಗ ಕವಿಗೆ ತನ್ನ ಸ್ವೋಪಜ್ಞತೆಯನ್ನಾಗಲೀ, ಪ್ರತಿಭೆಯನ್ನಾಗಲೀ ಮೆರೆಯಲು ಎಷ್ಟು ತೊಡಕುಗಳಿರುತ್ತವೆಯೋ, ಅಷ್ಟೇ ತೊಡಕು ಗಳು ಪಾತ್ರಚಿತ್ರಣದಲ್ಲಿಯೂ ಕಂಡುಬಂದರೆ ಅಚ್ಚರಿಯೇನಲ್ಲ. ಜೈನಾಗಮದ ಚೌಕಟ್ಟಿನಲ್ಲಿಯೂ ಮತ್ತು ಮೊದಲೇ ಸಂವಿಧಾನ ಕ್ಕೊಳಪಟ್ಟಿರುವ ಕಥಾನಕಗಳಲ್ಲಿಯೂ ಕವಿಗೆ ಒಂದು ಎಲ್ಲೆಕಟ್ಟು ಇರುವುದು ಸಹಜ. ಸಾಮಾನ್ಯವಾಗಿ ಜೈನಪುರಾಣಗಳಲ್ಲಿ ಪಾತ್ರ ಚಿತ್ರಣಗಳನ್ನು ಈ ಹಿನ್ನೆಲೆಯಲ್ಲಿಯೇ ವಿವೇಚಿಸಬೇಕಾಗುತ್ತದೆ.

ಇದಲ್ಲದೆ, ಪಾತ್ರಚಿತ್ರಣಗಳನ್ನು ವಿವೇಚಿಸುವಲ್ಲಿ ನಮಗೆ ಇನ್ನೊಂದು ಸಮಸ್ಯೆ ಎದುರಾಗುತ್ತದೆ. ಅದು, ಈ ರೀತಿಯ ಕಥೆಗಳಲ್ಲಿ ಬರುವ ಭವಾವಳಿ. ಒಂದು ಪಾತ್ರದ ಎಲ್ಲ ಭವಾವಳಿ ಗಳನ್ನೂ ಒಂದೇ ಪಕ್ಷಿನೋಟಕ್ಕೊಳಪಡಿಸಿ ವಿವೇಚಿಸಿದಾಗಲೇ ಅದರ ಸಮಗ್ರತೆ ನಮಗೆ ವೇದ್ಯವಾಗುತ್ತದೆ.

ಚಂದ್ರಪ್ರಭನ ಪಾತ್ರ ಚಿತ್ರಣವು ಅಂತಹ ಪಾತ್ರ ಗಳಲ್ಲೊಂದು. ಈ ಪಾತ್ರದ ಅರಳುವಿಕೆಯು, ಚಂದ್ರಪ್ರಭನು

ತೀರ್ಥಂಕರನಾಗಿ ಆ ಪಾತ್ರದ ಚಿತ್ರಣ ಮುಗಿಲು ಮುಟ್ಟುವ ವೇಳೆಗೆ, ಶ್ರೀವರ್ಮ, ಶ್ರೀಧರ, ಅಜಿತಸೇನ, ಅಚ್ಯುತೇಂದ್ರ, ಪದ್ಮನಾಭ ಮತ್ತು ಪದ್ಮನಾಭಚರನೆಂಬ ಆರು ಭವಗಳಲ್ಲಿ ಪರಿಷ್ಕರಣ ಹೊಂದಿರುತ್ತದೆ.

ಈ ಪರಿಷ್ಕರಣವು ಚಂದ್ರಪ್ರಭಭವವನ್ನೊಳಗೊಂಡು ಏಳು ಭವಗಳಲ್ಲಿಯೂ ಕ್ರಮೇಣ ಊರ್ಧ್ವಗತಿಯತ್ತ ಇರುವು ದನ್ನು ಕಾಣಬಹುದು. ಎಲ್ಲ ಭವಾಂತ್ಯದಲ್ಲಿಯೂ ಜಗತ್ತಿನ ಅನಿಶ್ಚಿತತೆಯ ಸಂಕೇತಗಳಾಗಿ, ಕರಗುವ ಇಂದ್ರ ಧನುಸ್ಸೋ, ದೇಹಕಾಂತಿ ಮಸಗುವುದೋ, ಕ್ಷೀಣಗತಿಯಲ್ಲಿರುವ ಚಂದ್ರ ದರ್ಶನವೋ, ಬಾಡುವ ನಿರ್ಮಾಲ್ಯವೋ, ಯುದ್ಧದಲ್ಲಿ ಛೇದಿಸಿದ ಮಾನವ ಶಿರಸ್ಸೋ ಇಲ್ಲವೇ ಇಂದ್ರನ ಸೂಚನೆಯ ಮೇರೆಗೆ ಧರ್ಮರುಚಿಯಂತಹ ಒಬ್ಬನು ಹಣ್ಣು ಹಣ್ಣು ಮುದುಕನ ರೂಪದಲ್ಲಿ ಬಂದು ಅಂತಕನು ಮನೆಯ ಬಾಗಿಲಿಗೆ ಬಂದಿರುವಂತೆ ತಿಳಿಸುವುದೇ ಮುಂತಾದ ಸೂಚನೆಗಳಿಂದ ಮನಸ್ಸು ಜಿನಚಿಂತನೆ ಯತ್ತ ತಿರುಗಿಸುವುದು ಕಂಡುಬರುತ್ತದೆ. ಇತರ ಕೆಲವು ಜೈನ ಪುರಾಣಗಳಿಗೆ ಹೋಲಿಸಿದರೆ ಇಲ್ಲಿ ಸಿದ್ಧಿಹೊಂದುವ ಜೀವವು ಏಕಮುಖವಾಗಿ ಪರಿಷ್ಕರಣಹೊಂದಿ ಉನ್ನತಿಯ ಕಡೆಗೇ ಏರುವು ದನ್ನು ಕಾಣುತ್ತೇವೆ. ಅದರಂತೆಯೇ ಅಧೋಲೋಕಕ್ಕೆ ಬರುವು ದಾಗಲೀ ತಿರ್ಯಗ್ಜನ್ಮಗಳನ್ನು ಪಡೆಯುವುದಾಗಲೀ ಇದರಲ್ಲಿ ಇಲ್ಲ. ಇದು ಇಲ್ಲಿಯ ಒಂದು ವೈಶಿಷ್ಟ್ಯ. ಈ ಮೇಲಿನ ವಿವೇಚನೆಗಳೆಲ್ಲವನ್ನೂ ಜೈನಪುರಾಣ ದೃಷ್ಟಿಯಿಂದ ನೋಡಿ ದ್ದಾಯಿತು.

ಇನ್ನು, ಕಾವ್ಯನಾಯಕನಾಗಿ ಈ ಪಾತ್ರ ಹೇಗೆ ಅರಳಿದೆ ಎಂಬ ದೃಷ್ಟಿಯಿಂದಲೂ ಕೆಲವು ಗಮನಾರ್ಹ ಅಂಶಗಳು ಕಂಡು

ಬರುತ್ತವೆ. ಅಜಿತಸೇನ, ಪದ್ಮನಾಭ ಮತ್ತು ಚಂದ್ರಪ್ರಭ ಈ ಮೂರನ್ನೂ ಒಟ್ಟು ನೋಟದಲ್ಲಿ ನೋಡಿದಾಗ ಶಾಂತರಸ ಪ್ರಧಾನವಾದ ಹಿನ್ನೆಲೆಯಲ್ಲಿ ಒಬ್ಬ ಧೀರೋದಾತ್ತ ನಾಯಕನನ್ನು ನಾವು ಕಾಣುತ್ತೇವೆ.

ಅಜಿತಸೇನನನ್ನು ಚಂಡರುಚಿಯು ಅಪಹರಿಸಿ, ಅವನನ್ನು ದುಷ್ಟ ಜಲಚರಗಳಿಂದ ತುಂಬಿದ್ದ ಸರೋವರದಲ್ಲಿ ಎಸೆದುಹೋದ ಪ್ರಸಂಗದಿಂದ ಆರಂಭವಾಗುತ್ತದೆ, ಧೀರೋದಾತ್ತನಾಯಕನ ಪಾತ್ರದ ಬೆಳವಣಿಗೆ. ಸರೋವರದಿಂದ ಈಜಿ ದಡಸೇರಿ, ಕಾಡಿನಲ್ಲಿ ಅಲೆದು ವಂಶಧರ ಪರ್ವತವನ್ನೇರಿ ಅಲ್ಲಿ ಜಗಜಟ್ಟಿಯೊಬ್ಬನನ್ನು ಮಲ್ಲಯುದ್ಧದಲ್ಲಿ ಜಯಿಸಿ, ಮುಂದೆ, ಅರಿಂಜಯನಾಡಿಗೆ ಒದಗಿದ್ದ ತೊಂದರೆಗಳನ್ನು ತನ್ನ ತೋಳ್ಬಲದಿಂದ ನಿವಾರಿಸಿ, ಅಲ್ಲಿನ ರಾಜಕುಮಾರಿಯನ್ನು ಮದುವೆಯಾಗುವ ಘಟನೆಯವರೆಗೆ ಒಂದು ಅಂಶವನ್ನು ನಾವಿಲ್ಲಿ ಗಮನಿಸಬಹುದು. ಇವನ ಸತ್ವಶಾಲಿತನ, ಗಾಂಭೀರ್ಯ, ಕ್ಷಮೆ, ಆತ್ಮಶ್ಲಾಘನೆ ಇಲ್ಲದಿರುವಿಕೆ, ನಿಶ್ಚಲತೆ, ನಿರಹಂಕಾರ, ಕಷ್ಟ ಬಂದಾಗ ಹಲುಬದೆ, ವಿಧಿಯನ್ನು ಹಳಿಯದೆ, ಬಂದ ಕಷ್ಟಗಳನ್ನು ದೃಢ ಮನಸ್ಕನಾಗಿ ಪರಿಹರಿಸಿಕೊಳ್ಳುವಿಕೆ ಇವೆಲ್ಲವೂ ಧೀರೋದಾತ್ತನ ಲಕ್ಷಣಗಳೇ ಆಗಿವೆ. ಕವಿ ಸಾಳ್ವನು ತನ್ನ 'ರಸರತ್ನಾಕರ'ದಲ್ಲಿ ಧೀರೋದಾತ್ತ ನಾಯಕನ ಲಕ್ಷಣಗಳನ್ನು ಕುರಿತು ಹೇಳಿರುವುದನ್ನು ಇಲ್ಲಿ ಗಮನಿಸಬಹುದು.

"ಕ್ಷಮೆಯುಳ್ಳಂ ಗಂಭೀರನ
ಸಮಸತ್ವಂ ಸತ್ಯಪಾಬ್ಧಿಯವಿಕತ್ಥನನ
ಚ್ಛಮನಂ ನಿರಹಂಕೃತನು
ತ್ತಮ ಧೀರೋದಾತ್ತ ನಾಯಕಾಖ್ಯಮನಾಳ್ಗುಂ"

(ತೃತೀಯ ಪ್ರಕರಣ, ಸೂತ್ರ ೭೪)

ಚಕ್ರವರ್ತಿಯ ದಿಗ್ವಿಜಯಗಳೂ,ಧೀರ ಸುಂದರ ವ್ಯಕ್ತಿಯಾದ ಅವನು ವಸಂತಋತುವಿನಲ್ಲಿ ಮಾಡುವ ವನವಿಹಾರ, ಚಂದ್ರಿಕಾ ವಿಹರಣ ವಿನೋದಗಳೂ, ಅವನ ಶೃಂಗಾರ, ರಸಿಕತೆಗಳಿಗೆ ಮೆರುಗುಕೊಟ್ಟು ಆ ಪಾತ್ರದ ಧೀರೋದಾತ್ತತೆಯನ್ನು ಪುಷ್ಟೀಕರಿಸುವುದಲ್ಲದೆ, ಮೇಲೆ ಹೇಳಿದಂತೆ ಶಾಂತರಸ ಪ್ರಧಾನವಾದ ಹಿನ್ನೆಲೆಯಲ್ಲಿ ನವರಸ ಪರಿಪುಷ್ಟವಾದ ಒಂದು ಚಿತ್ರಣವನ್ನು ಕಾಣುತ್ತೇವೆ.

ಇಡೀ ಪಾತ್ರದ ಉದ್ದಕ್ಕೂ ಅತಿರೇಕವೆನಿಸದ ಒಂದು ಬಿಗಿ ಇದೆ. ಹಂತ ಹಂತವಾಗಿ ನಿರೂಪಣೆಗೊಂಡು ಉನ್ನತಿಗೆ ಏರುತ್ತ ಏರುತ್ತ, ಪೂರ್ಣವಾಗಿ ವಿಕಾಸಗೊಂಡು ಪರಾಕಾಷ್ಠತೆಯನ್ನು ತಲುಪಿದ ಈ ಪಾತ್ರ ಚಂದ್ರಪ್ರಭನ ಜಿನಸಾಕ್ಷಾತ್ಕಾರದಲ್ಲಿ ಪರ್ಯವಸಾನಗೊಳ್ಳುತ್ತದೆ.ಚಕ್ರವರ್ತಿಯಾಗಿ ಮುಂದೆ ತೀರ್ಥಂಕರನಾಗುವ ಕೆಲವೇ ತೀರ್ಥಂಕರರಲ್ಲಿ ಚಂದ್ರಪ್ರಭನೂ ಒಬ್ಬ.

ಇನ್ನುಳಿದ ಪಾತ್ರಗಳು, ಈ ಕಾವ್ಯದಲ್ಲಿ, ಪಾತ್ರ ನಿರೂಪಣೆಯ ದೃಷ್ಟಿಯಿಂದ ಗೌಣವೆನ್ನಬಹುದು.

## ಚಂದ್ರಪ್ರಭ ಪುರಾಣ ಕಾವ್ಯಕ್ಕೆ ಮೂಲ

ಪುರಾಣ ಪುಣ್ಯಕಥೆ ಸ್ವೇಚ್ಛಾಕಲ್ಪಿತ ಕಾವ್ಯವಾಗಲು ಸಾಧ್ಯವಿಲ್ಲ. ಕಥಾವಸ್ತು ಪೌರಾಣಿಕವಾಗಿದ್ದು ವರ್ಣನಾಚಾತುರ್ಯ ಮಾತ್ರ ಕವಿಗೆ ಮೀಸಲಾಗಿರುತ್ತದೆ. ಚತುರ್ವಿಂಶತಿ ತೀರ್ಥಂಕರರಲ್ಲಿ ಎಂಟನೆಯ ತೀರ್ಥಂಕರನಾದ ಚಂದ್ರಪ್ರಭನ ಚರಿತ್ರೆ ಕನ್ನಡ ಭಾಷೆಯಲ್ಲಿ ಮಾತ್ರವಲ್ಲದೆ, ಸಂಸ್ಕೃತ, ಪ್ರಾಕೃತ, ಅಪಭ್ರಂಶ ಭಾಷೆಗಳಲ್ಲೂ ರಚಿತವಾಗಿರುವಂತೆ ತಿಳಿದುಬರುತ್ತದೆ.

ಅಗ್ಗಳದೇವನು ಕನ್ನಡದಲ್ಲಿ ರಚಿಸಿರುವ ಚಂದ್ರಪ್ರಭ ಪುರಾಣ ಚಂಪೂಕಾವ್ಯಕ್ಕೆ, ವೀರನಂದಿಯು ಸಂಸ್ಕೃತ ಭಾಷೆಯಲ್ಲಿ ರಚಿಸಿರುವ 'ಚಂದ್ರಪ್ರಭ ಚರಿತ' ಎಂಬ ಕಾವ್ಯವೇ ಮೂಲ ಎಂಬ ವಿಚಾರದಲ್ಲಿ ಯಾವ ವಿವಾದವೂ ಇರುವುದಿಲ್ಲ. ಎರಡು ಕಾವ್ಯಗಳನ್ನೂ ಸಮಗ್ರವಾಗಿ ಪರಿಶೀಲಿಸಿದಾಗ ವೀರನಂದಿಗಿಂತ ಅರ್ವಾಚೀನನಾದ ಅಗ್ಗಳದೇವನು ವೀರನಂದಿಯ ಕಾವ್ಯದ ಸಂಸ್ಕೃತ ಶ್ಲೋಕಗಳನ್ನು ಕನ್ನಡ ಪದ್ಯಗಳನ್ನಾಗಿ ತರ್ಜುಮೆಮಾಡಿ ತನ್ನ ಕಾವ್ಯದಲ್ಲಿ ಅಳವಡಿಸಿರುವುದನ್ನು ಕಾಣಬಹುದು ಎಂದ ಮಾತ್ರಕ್ಕೆ ಅಗ್ಗಳದೇವನ ಚಂದ್ರಪ್ರಭ ಪುರಾಣವು ವೀರನಂದಿಯ ಚಂದ್ರಪ್ರಭ ಚರಿತೆಯ ಸಮಗ್ರಾನುವಾದ ಕೃತಿಯಲ್ಲ. ಕಥಾ ನಿರೂಪಣೆಗೆ ಸಂಸ್ಕೃತ ಕಾವ್ಯವನ್ನು ಅವಲಂಬಿಸಿದ್ದರೂ, ಕೆಲವು ವರ್ಣನೆಗಳನ್ನು ಅನುವಾದಿಸಿದ್ದರೂ, ತನ್ನ ಸ್ವೋಪಜ್ಞತೆಯನ್ನೂ ಹೆಚ್ಚಾಗಿ ಮೆರೆದಿದ್ದಾನೆ. ಇದನ್ನು ಕಾವ್ಯದುದ್ದಕ್ಕೂ ಕಾಣಬಹುದು. ವೀರನಂದಿಯ ಚಂದ್ರಪ್ರಭ ಚರಿತೆಯನ್ನು ಅಗ್ಗಳದೇವನು ತನ್ನ ಕಾವ್ಯರಚನೆಗೆ ಅವಲಂಬಿಸಿದ್ದರೂ ಕಾವ್ಯದಲ್ಲೆಲ್ಲೂ ಗ್ರಂಥಋಣವನ್ನು ಸೂಚಿಸಿರುವುದಿಲ್ಲ.

ಜಾತಕತಿಲಕ ಕರ್ತೃವಾದ ಶ್ರೀಧರಾಚಾರ್ಯನು (ಕ್ರಿ.ಶ. ೧೦೪೯) 'ಚಂದ್ರಪ್ರಭ ಚರಿತೆ' ಎಂಬ ಕಾವ್ಯವನ್ನು ಬರೆದಿದ್ದಾನೆ. ಈವರೆವಿಗೂ ಈ ಕಾವ್ಯ ಉಪಲಬ್ಧವಾಗಿಲ್ಲದುದರಿಂದ ಈ ಚಂದ್ರಪ್ರಭ ಪುರಾಣಕ್ಕೆ ಚಂದ್ರಪ್ರಭ ಚರಿತೆಯ ಪ್ರಭಾವ ಎಷ್ಟಾಗಿದೆ ಎಂದು ಗುರುತಿಸಲಾಗುವುದಿಲ್ಲ.

ಕನ್ನಡ ಸಾಹಿತ್ಯದಲ್ಲಿ, ಉಪಲಬ್ಧ ಚಂದ್ರಪ್ರಭ ಚರಿತೆಗಳಲ್ಲಿ ಗುಣಭದ್ರನ ಉತ್ತರ ಪುರಾಣದ ಸಂಗ್ರಹಾನುವಾದವಾಗಿರುವ ಚಾವುಂಡರಾಯ ರಚಿತ ತ್ರಿಷಷ್ಟಿ ಶಲಾಕಾಪುರುಷ ಚರಿತದಲ್ಲಿರುವ

ಚಂದ್ರಪ್ರಭ ಚರಿತೆಯೇ ಮೊದಲನೆಯದು. ಅಗ್ಗಳದೇವನ ಚಂದ್ರಪ್ರಭ ಪುರಾಣ ಎರಡನೆಯದು. ಕ್ರಿ.ಶ. ೧೦೨೫ರಲ್ಲಿ ರಚಿತವಾಗಿರುವ ವಾದಿರಾಜನ ಪಾರ್ಶ್ವನಾಥ ಪುರಾಣದಲ್ಲಿ ವೀರನಂದಿಯ ಚಂದ್ರಪ್ರಭ ಚರಿತೆಯ ಉಲ್ಲೇಖವಿದೆ. ಇದರಿಂದ ವೀರನಂದಿಯ ಕಾವ್ಯ ಕ್ರಿ.ಶ. ೧೦೨೫ಕ್ಕಿಂತ ಪ್ರಾಚೀನವಾದದ್ದು ಎನ್ನುವುದು ಸುಸ್ಪಷ್ಟ. ಅಗ್ಗಳದೇವನು ವೀರನಂದಿಗಿಂತ ಅರ್ವಾಚೀನ ಕವಿ ಎನ್ನುವುದರಲ್ಲಿ ಸಂಶಯವಿಲ್ಲ. ಆದಕಾರಣ ಅರ್ವಾಚೀನ ಕನ್ನಡ ಕವಿಯಾದ ಅಗ್ಗಳದೇವನು ತನ್ನ ಕಾವ್ಯರಚನೆಗೆ ತನಗಿಂತ ಪ್ರಾಚೀನ ಸಂಸ್ಕೃತ ಕವಿರಚಿತವಾದ ಸಂಸ್ಕೃತ ಕಾವ್ಯದ ನೆರವನ್ನು ಪಡೆದಿದ್ದಾನೆಂಬ ವಿಚಾರದಲ್ಲಿ ಯಾವ ಭಿನ್ನಾಭಿಪ್ರಾಯಕ್ಕೂ ಅವಕಾಶವಿಲ್ಲ. ಕಥಾ ಸಂವಿಧಾನ ಮತ್ತು ಕೆಲವು ಜೈನತತ್ವ ನಿರೂಪಣೆಗಳು ಸಂಸ್ಕೃತ ಚಂದ್ರಪ್ರಭ ಚರಿತೆಯಲ್ಲಿರುವಂತೆಯೇ ಕನ್ನಡ ಕಾವ್ಯದಲ್ಲೂ ಇದೆ. ಹೆಚ್ಚು ಬದಲಾವಣೆಗಳಿಲ್ಲ. ವರ್ಣನಾಪ್ರಪಂಚಕ್ಕೆ ಕವಿ ಇಳಿದಾಗ ಸ್ವತಂತ್ರನಾಗಿದ್ದಾನೆ. ಕಥೆಗಿಂತ ವರ್ಣನಾಭಾಗವೇ ಈ ಕಾವ್ಯದಲ್ಲಿ ಅಧಿಕವಾಗಿ ಕಂಡುಬರುತ್ತದೆ ಎಂದರೆ ಉತ್ಪ್ರೇಕ್ಷೆ ಏನಲ್ಲ. ಮಹಾಕಾವ್ಯಕ್ಕೆ, ಮುಖ್ಯವಾಗಿ ಇರಬೇಕಾದ ಅಷ್ಟಾದಶ ವರ್ಣನೆಗಳಲ್ಲಿ ಸಾಧ್ಯವಾದಷ್ಟನ್ನು ರಸಭಾವಪೂರಿತವಾಗಿ ಮನಮುಟ್ಟುವಂತೆ ವರ್ಣಿಸಿದ್ದಾನೆ. ವಿಷಯ ಒಂದೇ ಆದರೂ ವರ್ಣನೆಯಲ್ಲಿ ವೈವಿಧ್ಯತೆ ಇರುವುದನ್ನು ಕಾವ್ಯದಲ್ಲಿ ಗಮನಿಸಬಹುದು. ಜಿನ–ಕಥೆಗಳಲ್ಲಿ ಸಾಮಾನ್ಯವಾಗಿ ಪಂಚ ಕಲ್ಯಾಣಗಳು, ತತ್ತ್ವೋಪದೇಶ, ತಪಃ ಪ್ರಭಾವ ಇದನ್ನು ಆಧರಿಸಿಯೇ ವರ್ಣನೆಗಳನ್ನು ಮಾಡಬೇಕಾಗುತ್ತದೆ. ಜಿನಕಥೆಯಲ್ಲಿ ವರ್ಣನೆಗಾಗಿಯೇ ಯಾವ ಮಾರ್ಪಾಡನ್ನೂ ಮಾಡಲಾಗುವುದಿಲ್ಲ. ಆದಕಾರಣ ಕಥೆಗೆ ಕುಂದುಂಟಾಗದಂತೆ, ಪರಿಪೋಷಕವಾಗುವಂತೆ ಸನ್ನಿವೇಶಗಳನ್ನು

ಕಲ್ಪಿಸಿಕೊಂಡು ವರ್ಣನೆಯನ್ನು ಮಾಡಬೇಕಾಗುತ್ತದೆ. ಇದೇ ಕವಿಯ ಚಾತುರ್ಯ. ಮತ್ತೊಂದು ಕೃತಿಯನ್ನು ಆಧರಿಸಿ ಕಾವ್ಯ ರಚನೆ ಮಾಡುವಾಗ ಹೊಸದಾದ ಸನ್ನಿವೇಶ ಕಲ್ಪನೆಗೂ ಕಷ್ಟ ವಾಗುತ್ತದೆ. ಅಗ್ಗಳದೇವನು ಈ ಎಲ್ಲ ತೊಡರುಗಳನ್ನು ಎದು ರಿಸಿದ್ದಾನೆ. ಕವಿಯಾದವನಿಗೆ ತಾನು ಅನುಭವಿಸಿದಂತೆ ನಿರೂಪಣೆ ಮಾಡುವ ಸಾಮರ್ಥ್ಯ ಇರಬೇಕು. ಆಗ ಆ ಕವಿತೆ ಸರ್ವಾದರ ಣೀಯವಾಗುತ್ತದೆ. ಈ ಕಲ್ಪನಾಶಕ್ತಿ ಎಲ್ಲ ಕವಿಗಳಲ್ಲೂ ಕಂಡು ಬರುವುದಿಲ್ಲ. ಅಗ್ಗಳದೇವನಿಗೆ ಈ ಶಕ್ತಿ ಇಲ್ಲವೇನೆಂದಲ್ಲ. ಕೆಲವು ವರ್ಣನೆಗಳನ್ನು ನೋಡಿದಾಗ, ಈತನಿಗೆ ಭಾವ ನಿರೂಪಣೆಯಲ್ಲಿ ಸೌಂದರ್ಯದೃಷ್ಟಿ, ಕಲ್ಪನಾವಿಲಾಸ ಇದೆ ಎನ್ನುವುದು ಗೋಚರ ವಾಗುತ್ತದೆ. ಆದರೂ ಅಗ್ಗಳದೇವನು ಜೈನ ಪುರಾಣ ಕಾವ್ಯ ಮಾರ್ಗೀ ಶೈಲಿಗಳ ಸಂಪ್ರದಾಯಕ್ಕೆ ಕಟ್ಟುಬಿದ್ದಂತಿದೆ. ಕವಿಗಿರ ಬೇಕಾದ ಸ್ವಾತಂತ್ರ್ಯ ಎದ್ದು ತೋರುವುದಿಲ್ಲ. ಇದರಿಂದ ಈತನ ವರ್ಣನೆಗಳಲ್ಲಿ ಸಹಜತೆ ಇರದೆ ಕವಿಸಮಯ ದ್ಯೋತಕತೆ ಅಧಿಕ ವಾಗಿರುವುದರಿಂದ ಕೃತಕತೆ ಮತ್ತು ಚರ್ವಿತ ಚರ್ವಣಗಳು ಇರಲು ಅವಕಾಶವಾಗಿದೆ. "ಶ್ರೀಪುರದ ರಾಜ ಶ್ರೀಷೇಣನಿಗೆ ಶ್ರೀಕಾಂತೆ ಯಲ್ಲಿ ಶ್ರೀವರ್ಮನು ಮಗನಾಗಿ ಹುಟ್ಟುತ್ತಾನೆ. ಈತನು ಮರಣಾನಂತರ ಸೌಧರ್ಮ ಕಲ್ಪದ ಶ್ರೀಪ್ರಭ ವಿಮಾನದಲ್ಲಿ ಶ್ರೀಧರನಾಗಿ ಜನಿಸುತ್ತಾನೆ. ಮುಂದಿನ ಜನ್ಮದಲ್ಲಿ ಶ್ರೀಧರನೇ ಕೌಶಲನಗರದ ರಾಜನಾದ ಅಜಿತಂಜಯನಿಗೆ, ಅಜಿತಸೇನೆಯಲ್ಲಿ, ಅಜಿತಸೇನ ಎಂಬ ಹೆಸರಿನಿಂದ ಮಗನಾಗಿ ಹುಟ್ಟುತ್ತಾನೆ. ಆಯುರವಸಾನದಲ್ಲಿ ಅಜಿತಸೇನನು ಹದಿನಾರನೆಯ ಅಚ್ಯುತಕಲ್ಪ ದಲ್ಲಿ ೩೫೦ ವಿಮಾನಗಳಿಗೆ ಒಡೆಯನಾಗಿ ಅಚ್ಯುತೇಂದ್ರ ಎಂಬ ಹೆಸರಿನಿಂದ ಜನಿಸುತ್ತಾನೆ. ಜನ್ಮಾವಸಾನದಲ್ಲಿ ಅಚ್ಯುತೇಂದ್ರನೇ

ರತ್ನ ಸಂಚಯ—ಪುರದ ರಾಜನಾದ ಕನಕ ಪ್ರಭನಿಗೆ ಆತನ ಪತ್ನಿ ಸುವರ್ಣ ಮಾಲೆಯಲ್ಲಿ ಪದ್ಮನಾಭ ಎಂಬ ಹೆಸರಿನ ಮಗನಾಗಿ ಹುಟ್ಟುತ್ತಾನೆ" ಎಂಬ ಪದ್ಮನಾಭನ ಪೂರ್ವಭವಾವಳಿ ಕಥೆಯನ್ನು ೯ನೆಯ ಆಶ್ವಾಸದ ೬೪ನೆಯ ಪದ್ಯದವರೆಗೆ ಅಗ್ಗಳನು ವಿವರಿಸಿದ್ದಾನೆ. ಮುಂದಿನ ಭವದಲ್ಲಿ ಪದ್ಮನಾಭನೇ ಪದ್ಮನಾಭಚರ ಎಂಬ ಅಹಮಿಂದ್ರನಾಗಿ ಜನಿಸಿ ಆಯುರವಸಾನವಾದ ಮೇಲೆ ಮಹಾಸೇನನಿಗೆ ಲಕ್ಷ್ಮಣಾದೇವಿಯ ಗರ್ಭದಲ್ಲಿ ಚಂದ್ರಪ್ರಭನೆಂಬ ಹೆಸರಿನಿಂದ ಜನಿಸಿ ತಪಸ್ಸಿನ ಮಹಿಮೆಯಿಂದ ಚಂದ್ರಪ್ರಭ ತೀರ್ಥಂಕರನಾಗುವವರೆಗಿನ ಕಥಾಭಾಗಕ್ಕೆ ಮುಂದಿನ ಏಳು ಆಶ್ವಾಸಗಳು ಮೀಸಲಾಗಿವೆ. ಈ ಭಾಗದಲ್ಲಿ ಕಥಾಭಾಗಕ್ಕಿಂತ ಜಿನತತ್ವ ವರ್ಣನೆಯ ಭಾಗವೇ ಅಧಿಕವಾಗಿದೆ.

ಈ ಪುರಾಣಕಾವ್ಯ ಹಳಗನ್ನಡ ಶೈಲಿಯಲ್ಲೇ ರಚಿತವಾಗಿದೆ. ಇದರಲ್ಲಿ ಶಬ್ದಾಲಂಕಾರಗಳೂ, ಸ್ವಭಾವೋಕ್ತಿ, ಉತ್ಪ್ರೇಕ್ಷೆ, ರೂಪಕ, ಉಪಮಾ ಮುಂತಾದ ಅಲಂಕಾರಗಳಿಗೆ ಕೊರತೆ ಇಲ್ಲ. ವರ್ಣನಾ ವೈಖರಿ ಬಹುಮಟ್ಟಿಗೆ ಪ್ರಾಚೀನ ಮಾರ್ಗವನ್ನೇ ಅವಲಂಬಿಸಿದೆ. ಕೆಲವು ಕಡೆಗಳಲ್ಲಿ ಕನ್ನಡ ಪದಗಳೇ ಇಲ್ಲದ ಸಂಸ್ಕೃತ ಪದಗಳಿಂದ ಕೂಡಿದ ಕನ್ನಡ ಪದ್ಯಗಳನ್ನು ಕಾಣಬಹುದು. ಕಾವ್ಯ ಮಧ್ಯದಲ್ಲಿ ಕೆಲವು ಸಂಸ್ಕೃತ ಸೂಕ್ತಿಗಳನ್ನೂ, ಕನ್ನಡ ನುಡಿಗಟ್ಟುಗಳನ್ನೂ ಸಮಯೋಚಿತವಾಗಿ ಸೇರಿಸಿದ್ದಾನೆ. ಇದನ್ನು ಸಂಗ್ರಹಿಸಿ ಮುಂದೆ ಕೊಟ್ಟಿದೆ.

ಸಂಸ್ಕೃತ ಶ್ಲೋಕಗಳನ್ನೇ ಮಧ್ಯದಲ್ಲಿ ರಚಿಸಿ ಸೇರಿಸಿರುವುದು ಈತನ ಒಂದು ವೈಶಿಷ್ಟ್ಯ. ಜಿನನ ಪುಣ್ಯಕಥೆಯನ್ನು ಪುರಾಣರೂಪ ಚಂಪೂ ಪ್ರಬಂಧದಲ್ಲಿ ಸಮರ್ಥವಾಗಿ ನಿರೂಪಿಸಿರುವ ಉಭಯಭಾಷಾ ವಿದ್ವಾಂಸನಾದ ಅಗ್ಗಳದೇವ ಸಂಪ್ರ

ದಾಯದ ಸತ್ಕವಿಯಾಗಿ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಮನ್ನಣೆ ಪಡೆದಿದ್ದಾನೆ.

## ಚಂದ್ರಪ್ರಭ ಜಿನನ ಗರ್ಭಾವತರಣ ಕಾಲವಿಚಾರ

ವೀರನಂದಿ, ಚಂದ್ರಪ್ರಭ ಜಿನನ ಗರ್ಭಾವತರಣ ಕಾಲವನ್ನು ತಿಳಿಸಿರುವುದಿಲ್ಲ. ಅಗ್ಗಳದೇವನು ಆ ಕಾಲವನ್ನು "ಚೈತ್ರ ಬಹುಳ ಪಂಚಮಿ ಶ್ರವಣ ನಕ್ಷತ್ರ ಶುಭಯೋಗದೊಳ್ ಚಂದ್ರ ಮಂಡಲಾಕಾರದಿಂ ಲಕ್ಷ್ಮಣಾದೇವಿಯ ಮುಖ ಮುಕುರಮಂ ಪೊಕ್ಕು ವಿಮಲಗರ್ಭ ಕುಮುದಿನಿಯೊಳಮರ ಪ್ರತಿಕೃತ ಪ್ರಥಮ ಕಲ್ಯಾಣ ಪೂಜಾ ಪುರಸ್ಸರಮವತರಿಸಿದಂ" ಎಂದು ತಿಳಿಸಿರು ತ್ತಾನೆ. ಇದೇ ಕಾಲವನ್ನು ದೊಡ್ಡಯ್ಯ ಕವಿಯೂ ತನ್ನ ಚಂದ್ರ ಪ್ರಭ ಚರಿತೆಯಲ್ಲಿ ತಿಳಿಸಿದ್ದಾನೆ. ಆದರೆ ಚೈತ್ರ ಬಹುಳ ಪಂಚಮಿ ದಿವಸ ಶ್ರವಣ ನಕ್ಷತ್ರ ಸೇರುವುದಿಲ್ಲ. ಆದಕಾರಣ ಶ್ರವಣ ನಕ್ಷತ್ರ ಎಂದು ತಿಳಿಸಿರುವುದು ತಪ್ಪಾಗುತ್ತದೆ.

ಚಂದ್ರಪ್ರಭನ ಜನನ ಪುಷ್ಯಮಾಸ ಶುಕ್ಲಪಕ್ಷದ ಏಕಾದಶಿಯ ದಿನ ಅಪರಾಹ್ನದಲ್ಲಿ. ಈ ಕಾಲವನ್ನು ವೀರನಂದಿಯು "ಪೌಷಾಮಲಿನ ದಶಮೀ ಕ್ಷಯಜಾಂ ತಿಥಿಮಾಪ್ಯ ಸುಂದರ ಮಜೀಜನತ್ಸುತಂ" ಎಂದು ತಿಳಿಸಿದ್ದಾನೆ. ಇಲ್ಲಿ, ನಕ್ಷತ್ರ ಮತ್ತು ಯೋಗದ ವಿಚಾರವಿಲ್ಲ. ಅಗ್ಗಳನು "ದೊರೆವೆತ್ತು ಪುಷ್ಯಮಾಸಂ ವಿಲಸಿತಸಿತಪಕ್ಷಂ ತದೇ ಕಾಶೀ ವಾಸರಮಾಂತಾ ರೋಹಿಣಿ ತಾರಕೆಯುತಿ ಶುಭದಂ ಶುಕ್ಲಯೋಗಂ ಸಮಂತೊಂದಿರೆ" ಎಂದು ರೋಹಿಣೀನಕ್ಷತ್ರ ಮತ್ತು ಶುಕ್ಲ ಯೋಗವನ್ನೂ ಸೇರಿಸಿ ಹೇಳಿರು ತ್ತಾನೆ. ಪುಷ್ಯ ಮಾಸ ಶುಕ್ಲ ಸಪ್ತಮೀ ದಿವಸ ರೋಹಿಣೀನಕ್ಷತ್ರ ಶುಕ್ಲಯೋಗ ಸೇರುತ್ತದೆ. ಇದು ಅಸಂಭವವೇನಲ್ಲ. "ಕೇವಲ

ಜ್ಞಾನ ನೇತ್ರಮುನ್ಮೀಲಿಸಿತ್ತು ಸರ್ವಗತಂ ಫಾಲ್ಗುನ ಮಾಸ ಬಹುಳ ಸಪ್ತಮ್ಯನೂರಾಧೆಯುನೊಂದಿ ಸಂದ ಸಾಯುಂತನದೊಳ್" ಎಂದು ಅಗ್ಗಳದೇವನು ತಿಳಿಸಿರುವಂತೆ, ಚಂದ್ರಪ್ರಭ ಜಿನನಿಗೆ ಕೇವಲಜ್ಞಾನೋನ್ಮೀಲನ ಫಾಲ್ಗುನ ಬಹುಳ ಸಪ್ತಮೀ ಅನೂರಾಧ ನಕ್ಷತ್ರದ ದಿವಸ ಸಾಯಂಕಾಲದಲ್ಲಿ. ವೀರನಂದಿ ಈ ಕಾಲವನ್ನು ತಿಳಿಸಿರುವುದಿಲ್ಲ, ಅಂತೆಯೇ,

"ಸದಭಿಷ್ಟುತಂಗೆ ಸಮನಿಸಿ
ದುದು ವಿಶ್ರುತ ಪುಷ್ಯಮಾಸದೊಳ್ ಸುಸಿತಪ
ಕ್ಷದೊಳೆಸೆವೇಕಾದಶಿಯೊಳ
ವಿದಿತಾನೂರಾಧೆಯೊಳ್ ತಪಶ್ರೀ ಯೋಗಂ" ೧೩.೧೧೧

ಎಂದು ಅಗ್ಗಳದೇವನು ಹೇಳಿರುವ ತಪಶ್ರೀಯೋಗದ ಕಾಲವನ್ನೂ ವೀರನಂದಿ ತಿಳಿಸಿಲ್ಲ, ಜನನ ಕಾಲದ ಮಾಸ, ಪಕ್ಷ, ತಿಥಿಗಳೇ ಇಲ್ಲಿ ಉಕ್ತವಾಗಿದ್ದರೂ ನಕ್ಷತ್ರ ಮಾತ್ರ ಭಿನ್ನವಾಗಿದೆ. ಈ ತಿಥಿಯಂ ದಿವಸ ಅನೂರಾಧ ನಕ್ಷತ್ರ ಬರುವುದಿಲ್ಲ. ಈ ನಕ್ಷತ್ರ ಸೇರುವುದಂ ಅಸಂಭವ. ಆದ ಕಾರಣ ಇಲ್ಲಿ ತಿಳಿಸಿರುವ ಕಾಲದಲ್ಲಿ ತಪ್ಪಿದೆ.

"ಸಮನಿಸೆ ಫಾಲ್ಗುನಸಿತಸ
ಪ್ತಮಿಯಪರಾಹ್ಣಂ ಶುಭಪ್ರದಂ ಜ್ಯೇಷ್ಠೆತದು
ತ್ತಮ ಸಮಯದೊಳಪಗತ ಸಕ
ಲಮಲಂ ತ್ರೈಲೋಕ್ಯ ಶಿಖರಿ ಶೇಖರನಾದಂ"

ಎಂದು ಅಗ್ಗಳನು ಚಂದ್ರಪ್ರಭನ ನಿರ್ವಾಣ ಕಾಲವನ್ನು, ಫಾಲ್ಗುನ ಶುಕ್ಲ ಪಕ್ಷ ಸಪ್ತಮಿಾ ದಿವಸ ಜ್ಯೇಷ್ಠಾ ನಕ್ಷತ್ರದಲ್ಲಿ ಅಪರಾಹ್ನ ಕಾಲದಲ್ಲಿ ಎಂದು ತಿಳಿಸಿರುತ್ತಾನೆ. ಆದರೆ ವೀರನಂದಿ ಈ ಕಾಲವನ್ನು

"ತತ್ರಾಪರಿಮುಕ್ತಮಾಸ ವಿಹೃತಿಃ ಪಕ್ಷೇಸಿತೇ ಸಪ್ತಮೀ ತಿಥ್ಯಾಂ ಭಾದ್ರಪದೇ ಸ್ಥಿತಃ ಪ್ರತಿಮಯಾ ಸಾರ್ಧಃ ಮುನೀನಾಂ

ಗಣ್ಯೈಃ ನಿರ್ಬಾಧಂ ದಶಪೂರ್ವಲಕ್ಷ ಪರಿಮಾಣಸ್ಯಾಯುಂಷಃ ಪ್ರಕ್ಷಯೇ ಶುಕ್ಲಧ್ಯಾನ ನಿರಸ್ತ ಕೃತ್ಸ್ನ ಕಲುಷಃ ಸಿದ್ಧೇಃ ಪದಂ ಶಿಶ್ರೀಯೇ" ಎಂದು ಹೇಳಿರುವುದರಿಂದ ಚಂದ್ರಪ್ರಭ ಜಿನನ ನಿರ್ವಾಣ ಕಾಲ ಭಾದ್ರಪದ ಶುಕ್ಲ ಸಪ್ತಮೀ ದಿವಸ ಎಂದು ಸ್ಪಷ್ಟ ಪಡುತ್ತದೆ. ಇದರಿಂದ ಜಿನನಿರ್ವಾಣಕಾಲ, ಅಗ್ಗಳನಂತೆ ಫಾಲ್ಗುಣ ಮಾಸವಾದರೆ, ವೀರನಂದಿಯಂತೆ ಭಾದ್ರಪದಮಾಸವಾಗುತ್ತದೆ. ಇಲ್ಲಿ ಮಾಸಗಳು ಭಿನ್ನವಾಗಿರುವುದು ಗಮನಾರ್ಹ, ಈ ಕಾಲ ನಿರೂಪಣೆಯಲ್ಲಿ ದೊಡ್ಡಯ್ಯನು ಅಗ್ಗಳದೇವನನ್ನೇ ಅನುಸರಿಸಿದ್ದಾನೆ.

## ಕವಿಯ ಉದ್ದೇಶ

ಗ್ರಂಥಾಂತ್ಯದ ೧೬ ನೆಯ ಆಶ್ವಾಸದ ಕೊನೆಯಲ್ಲಿ ತಿಳಿಸಿರುವಂತೆ ೮೧ ನೆಯ ಪದ್ಯದಿಂದ ೮೫ನೆಯ ಪದ್ಯದ ಪೂರ್ತಿ "ಕ್ರಮವಾಗಿ ನಿರ್ವಾಣ ಕಲ್ಯಾಣವನ್ನು ರಚಿಸಿದ್ದೇನೆ. ಶ್ರೀ ಜಿನಸ್ತೋತ್ರ ಕಲ್ಪದ್ರುಮ ಸಫಲವಾಯಿತು. ನನ್ನ ಅಭಿಮತ ಸಿದ್ಧಿಯಾಯಿತು. ನವ್ಯವಾದ ಈ ಜಿನೇಶನ ಕಾವ್ಯವನ್ನು ನಿರ್ಮಲ ಭಕ್ತಿಭಾವದಿಂದ ರಚಿಸಿ ಅಮಲಿನ ಕೀರ್ತಿ ಸುಕೃತ ಪೂರ್ತಿಯನ್ನು ಪಡೆಯಲು ಅಗ್ಗಳ ದೇವನಂತೆ ಯಾರು ತಾನೇ ಪುಣ್ಯವಂತರು? ಈ ಚಂದ್ರಪ್ರಭ ಚರಿತೆಯನ್ನು ಆಚಂದ್ರಾರ್ಕ ಸ್ಥಾಯಿಯಾಗಿರುವಂತೆ ರಚಿಸಿ ಶರತ್ಕಾಲದ ಚಂದ್ರನ ಕಾಂತಿಯಂತೆ ಉಜ್ವಲಕೀರ್ತಿಗೆ ನೆಲೆಯಾಗಿದ್ದಾನೆ ಅಗ್ಗಳ. ಅಸಹಾಯನಾಗಿ ಶಶಿಪ್ರಭ ಸಂಸಾರ ಸಾಗರವನ್ನು ದಾಟಿದಂತೆ, ಅಸಹಾಯನಾಗಿಯೇ ಅಗ್ಗಳನೂ ಆತನ ಚರಿತ್ರೆಯೆಂಬ ಸಾಗರದಲ್ಲಿ ಈಜಿ ಯಶಸ್ಸನ್ನು ಪಡೆದಿದ್ದಾನೆ. ಪೂರ್ಣಚಂದ್ರನಲ್ಲಿ ಷೋಡಶ ಕಲೆಗಳು ತುಂಬಿರುವಂತೆ ತನ್ನ ಈ ಕಾವ್ಯವೂ

ಹದಿನಾರು ಆಶ್ವಾಸಗಳಿಂದ ಕೂಡಿ, ಪ್ರಸಿದ್ಧಿ ಪಡೆಯುತ್ತದೆ. ಈ ಕಾವ್ಯರಚನೆಯಿಂದ ತನಗೆ ಮೋಕ್ಷವೂ ಯಶಸ್ಸೂ ಲಭಿಸುತ್ತದೆ" ಎಂದು ಅಗ್ಗಳನು ಆಶಿಸಿದ್ದಾನೆ.

## ಪದ್ಯಸಂಖ್ಯೆ ಮತ್ತು ಛಂದಸ್ಸು

ಚಂದ್ರಪ್ರಭ ಪುರಾಣದಲ್ಲಿ ೧೯೯೧ ಪದ್ಯಗಳಿವೆ. ಇವಲ್ಲದೆ ಸುಮಾರು ೯೬ ಪ್ರಕ್ಷಿಪ್ತ ಪದ್ಯಗಳಿವೆ. ೧೯೯೧ ಪದ್ಯಗಳಲ್ಲಿ ಸಂಸ್ಕೃತ ಶ್ಲೋಕಗಳು ೨೯; ಕಂದ ಪದ್ಯಗಳು ೧೨೩೯; ಉಳಿದ ೭೨೩ ವೃತ್ತಗಳು. ಇವುಗಳಲ್ಲಿ ಮಾಲಿನೀ–೧೨, ಪೃಥ್ವೀ–೪, ಹರಿಣೀ–೩, ಅನವದ್ಯ–೧, ಪಿರಿಯಕ್ಕರ–೧, ತ್ರಿಪದಿ–೧, ಮಲ್ಲಿಕಾಮಾಲೆ–೧, ರಗಳೆ–೧, ಶಿಖರಿಣೀ–೧, ಉತ್ಸಾಹ–೨, ಮಂದಾಕ್ರಾಂತ–೧, ಈ ೨೮ ವೃತ್ತಗಳನ್ನು ಬಿಟ್ಟರೆ ಉಳಿದ ೬೯೫ ವೃತ್ತಗಳು ಕನ್ನಡ ಛಂದಸ್ಸಿನಲ್ಲಿ ಹೆಚ್ಚು ಪ್ರಚಲಿತವಾಗಿರುವ ಮತ್ತೇಭವಿಕ್ರೀಡಿತ, ಸ್ರಗ್ಧರಾ, ಮಹಾಸ್ರಗ್ಧರಾ, ಚಂಪಕಮಾಲೆ, ಉತ್ಪಲಮಾಲೆ ಮತ್ತು ಶಾರ್ದೂಲ ವಿಕ್ರೀಡಿತ ಈ ಪ್ರಸಿದ್ಧವಾದ ಛಂದೋ ಪ್ರಭೇದಗಳಿಗೆ ವಿನ್ಯಾಸಲಾಗಿವೆ. ಈ ಪುರಾಣ ಕಾವ್ಯದಲ್ಲಿ ಸುಮಾರು ೩೬ ಗದ್ಯಗಳೂ ಮತ್ತು ಹಲವು ಸಣ್ಣ ವಚನಗಳೂ ಇವೆ.

## ಭಾಷಾಂತರ

ಒಂದು ಭಾಷೆಯಲ್ಲಿರುವ ಸಾಹಿತ್ಯವನ್ನು ಮತ್ತೊಂದು ಭಾಷೆಗೆ ಆ ಭಾಷಾಮರ್ಯಾದೆಯನ್ನನುಸರಿಸಿ ಭಾಷಾಂತರ ಮಾಡುವುದು ಸಾಮಾನ್ಯವಾದದ್ದೇನಲ್ಲ. ಉಭಯ ಭಾಷೆಗಳಲ್ಲಿ ನಿಷ್ಣಾತನಾಗಿರುವವನಿಗೂ ಭಾಷಾಂತರ ಸುಲಭ ಸಾಧ್ಯವಲ್ಲ. ಭಾಷಾಂತರ ಮಾಡಿದ ತರುವಾಯ ಆ ಕೃತಿ ಕೇವಲ ಭಾಷಾಂತರ ಮಾತ್ರವಾಗದೆ ಸ್ವತಂತ್ರ ಕೃತಿಯಂತೆಯೇ ಕಂಡು ಬರಬೇಕು.

ಇದು ಭಾಷಾಂತರ ಮಾಡುವವನ ಪಾಂಡಿತ್ಯ ಮತ್ತು ಪದ ಸಂಪತ್ತಿನಿಂದ ಮಾತ್ರ ಸಾಧ್ಯ. ಕಾವ್ಯಗಳಲ್ಲಿ ಭಾಷಾಂತರ ಮೂಲಕ್ಕೆ ಅತಿ ಸಮೀಪವರ್ತಿಯಾದಾಗ ಮೂಲಕೃತಿಯಲ್ಲಿ ರುವ ಪದಗಳ ಬಳಕೆ ಭಾಷಾಂತರಿತ ಕೃತಿಯಲ್ಲಿ ಅನಿವಾರ್ಯ ವಾಗುತ್ತದೆ.

ಅಗ್ಗಳದೇವನು ವೀರನಂದಿಯ ಸಂಸ್ಕೃತ ಶ್ಲೋಕಗಳನ್ನು ಕನ್ನಡ ಪದ್ಯಕ್ಕೆ ತರ್ಜುಮೆ ಮಾಡಿರುವ ಶೈಲಿಯನ್ನು ಈ ಕೆಳಗೆ ಕೊಟ್ಟಿ ರುವ ಒಂದೆರಡು ಉದಾಹರಣೆಗಳಿಂದ ಸ್ಪಷ್ಟವಾಗಿ ತಿಳಿಯ ಬಹುದು.

ಸಂ. ಶ್ಲೋ.[1] ಸ ನ ಪ್ರದೇಶೋಽಸ್ತಿ ನ ಯೋಜನಾಕುಲೋ
ಜನೋಽಪ್ಯಸೌ ನಾಸ್ತಿ ನ ಯೋಧನೇಶ್ವರಃ
ಧನಂ ನ ತದ್ಭೋಗ ಸಮನ್ವಿತಂ ನ ಯ
ನ್ನಯತ್ರ ಭೋಗೋಽಪಿ ಸ ಯೋ ನ ಸಂತತಃ
೧–೩೫

ಕ. ಪ. ಜನವಿರಹಿತಮಿಲ್ಲೊಂದೆಡೆ
ಜನಮುಂ ಧನಹೀನಮಿಲ್ಲ ಧನಮುಪಭೋಗಾ
ರ್ಜನ ಶೂನ್ಯಮಿಲ್ಲ ಭೋಗಮು
ಮನಿರಂತರಮೆನಿಪುದೆಂದುಮಿಲ್ಲಾ ಪುರದೊಳ್
೧–೧೨೦

ಇಲ್ಲಿ ಮೂಲ ಶ್ಲೋಕದ ಅಭಿಪ್ರಾಯವನ್ನು ಸ್ವತಂತ್ರವಾಗಿ ಕನ್ನಡ ಪದ್ಯದಲ್ಲಿ ಕವಿ ಅಚ್ಚೊಳಿಸಿರುವುದನ್ನು ಕಾಣಬಹುದು.

---

1 ಸಂ. ಶ್ಲೋ :—ಚಂದ್ರಪ್ರಭ ಚರಿತೆಯ ಶ್ಲೋಕ.
ಕ. ಪ :—ಚಂದ್ರಪ್ರಭ ಪುರಾಣದ ಪದ್ಯ.

ಸಂ. ಶ್ಲೋ. ನಿಪಾತಯಂತೀ ತರಲೇ ವಿಲೋಚನೇ
ಸಜೀವ ಚಿತ್ರಾಸು ನಿವಾಸ ಭಿತ್ತಿಷು
ನವಾ ವಧೂರ್ಯತ್ರ ಜನಾಭಿಶಂಕಯಾ
ನ ಗಾಢಮಾಲಿಂಗತಿ ಜೀವಿತೇಶ್ವರಂ ೧—೩೭

ಕ. ಪ. ಪೊಳಗುವ ಪಳಿಕಿನ ಮಾಡಂ
ಗಳೊಳಿನಿಯುರೊಳೊಂದೆ ಪೊಱಗೆ ಮೆಱೆವುದು ಕೇಳೀ
ವಿಳಸನವೆಂದೊಲ್ಲದೆ ಬಿ
ಟ್ಟೆಳಸುವುದಬಳಾಳಿ ಧವಳಗೃಹದೋವರಿಯೊಳ್
೧—೧೨೭

ಇಲ್ಲಿ ಶ್ಲೋಕದ ಭಾವಾನುವಾದವನ್ನು ಕವಿ ಕನ್ನಡದಲ್ಲಿ ರಮಣೀಯವಾಗಿ ಚಿತ್ರಿಸಿದ್ದಾನೆ.

ಸಂ. ಶ್ಲೋ. ಕ್ಷಣಭಂಗುರವೃತ್ತಿ ಜೀವಿತಂ
ಭವಭಾಜಾಮಿತಿ ನಾತ್ರ ವಿಸ್ಮಯಃ
ತದಿಹಾದ್ಭುತ ಮೀತದೀದೃಶಂ
ಯದವಸ್ಯದ್ಭಿರಪಿ ಪ್ರಮುಹ್ಯತೇ ೧—೬೭

ಕ. ಪ. ಕ್ಷಣಭಂಗ ವೃತ್ತಿ ತನುಭೃ
ದ್ಗಣ ಜೀವನವಲ್ಲಿ ಸಂಶಯಂ ನೋಟಕ್ಕೊಡಿನಿ
ತಣಮಿಲ್ಲದನಱಿದುಮಿದೇ
ನಣಕವೊ ಮತಿವಂತರುಂ ವಿಮೋಹಿಸುತಿರ್ಪರ್
೨—೩೧

ಸಂ. ಶ್ಲೋ. ಯದತೀತಮತೀತ ವೇದ ತತ್
ಸುಖಮಾಗಾಮಿನಿ ಕೋ ವಿನಿಶ್ಚಯಃ
ಸಮುಪೈತಿ ವೃಥಾ ಬತ ಶ್ರಮಂ
ಪುರುಷಸ್ತತಕ್ಷಣ ಸೌಖ್ಯಮೋಹಿತಃ ೧—೭೦

ಕ. ಪ. ಭಾವಿ ಎನಿಸಿರ್ದ ಭೋಗದೊ
ಳಾವುದು ನಿಶ್ಚಯಮತೀತಮದತೀತಮೆ ದಲ್

ಜೀವಂ ತದಾತ್ವ ಸುಖಲವ
ಸೇವೆಗೆ ಕಳವಳಿಪುದದಱಿಂೊಳೇಂ ಪುರುಳುಂಟೆ
೨–೩೬

ಸಂ. ಶ್ಲೋ. ಪ್ರಹತಂ ಮರಣೇನ ಜೀವಿತಂ
ಜಲಸಾ ಯೌವನಮೇವ ಪಶ್ಯತಿ
ಪ್ರತಿಜಂತು ಜನಸ್ತದಪ್ಯಹೋ
ಸ್ವಹಿತಂ ಮಂದಮತಿರ್ನ ಪಶ್ಯತಿ ೧–೬೯

ಕ. ಪ. ಸಿರಿಗೆ ದರಿದ್ರತೆ ಬಾಟಿಕ್ಕೆಗೆ
ಮರಣಂ ಜರೆಯೌವನಕ್ಕಮಭಿಘಾತಮೆನು
ತ್ತಿರೆ ಕಂಡುಂ ಕೇಳ್ದುಂ ಗಡ
ಪರಿವರ್ತಿಸರಾತ್ಮಹಿತದೊಳತಿ ದುರ್ವರ್ತಿಗಳ್
೨–೩೭

ಸಂ. ಶ್ಲೋ. ಚಂದ್ರೋಜ್ಝಿತಾಂ ರವಿರಲಂಕುರುತೇ ಘನಾನಾಂ
ವೀಥೀಂ ಸರೋಜನಿಕರಃ ಸರಸೀಮುಹಂಸಾಂ
ಪುತ್ರಂ ವಿಹಾಯ ನಿಜಸಂತತಿ ಬೀಜಮನ್ಯೋ
ನತ್ವಸ್ತಿ ಮಂಡನ ವಿಧಿಃ ಕುಲಪುತ್ರಿಕಾಣಾಂ ೩–೩೩

ಕ. ಪ. ಸರೋಜ ಸಖನಿಲ್ಲದಂಬರಮನಾದಮುದ್ಯೋತಿಸಲ್
ಸರೋಜರಿಪುವಂಚೆಯಿಲ್ಲದ ಸರೋವರೋದ್ದೇಶಮಂ
ಸರೋರುಹಮೆ ಭೂಷಿಸಲ್ ನೆರೆಗುಮನ್ಯನಾವಂ ದಿಟಂ
ತೆರಳ್ಚುಗುಮಪತ್ಯಮಿಲ್ಲದೆ ಕುಲಕ್ಕೆ ಸಂಪತ್ತಿಯಂ
೩–೬೩

ಸಂ. ಶ್ಲೋ. ಶೋಕಶ್ಶರೀರ ಹೃದಯೇಂದ್ರಿಯ ಶೋಷಹೇತು
ರ್ಯುಕ್ತೋ ನ ದೇವಿ ತವ ವಸ್ತುನಿ ದೈವಸಾಧ್ಯೇ
೩–೩೬

ಕ. ಪ. ಇದು ದೈವಸಾಧ್ಯಮೆನಿಸಿ
ರ್ದುದದಱಿಂೊಳ್ ನಿನಗಿನಿತು ದೇವಿ ಬಗೆವೊಡಯುಕ್ತಂ
ಹೃದಯ ಶರೀರೇಂದ್ರಿಯ ಶೋ
ಷದಾಯಕಂ ತಾನೆನಿಪ್ಪ ಶೋಕೋದ್ರೇಕಂ ೩–೬೪

ಸಂ. ಶ್ಲೋ. ದುಃಖೇನ ತೇ ಪ್ರಥಮಮಸ್ಮ್ಯಹಮೇವ ದುಃಖೀ
ಮದ್ದುಃಖತೋ ಭವತಿ ಸರ್ವಜನಸ್ಯದುಃಖಂ
ಇತ್ಥಂ ಸಮಸ್ತ ಜನತಾ ಪರಿತಾಪಹೇತೋ
ರ್ಮಾಗಾಃ ಕೃಪಾವತಿ ಶುಚೋ ವಶಮುದ್ಧತಾಯಾಃ
೩–೩೭

ಕ. ಪ. ಈ ತೆಱದಿಂದೆ ನೀನಿರೆ ಸಮಂತೆನಗಂ ದೊರೆಕೊಳ್ಗು
ಮಲ್ತೆ ದುಃ
ಖಾತಿಶಯಂ ಬೞಿಕ್ಕದುವೆ ಮಾೞ್ಕುಮಶೇಷ ಜನರ
ಮೆಯ್ದೆ ಚಿಂ
ತಾ ತರಳತ್ವಮಂ ತೊಱೆವುದಂತದಱಿಂ ತರಳಾಯತಾಕ್ಷಿ ನೀ
ರ್ಹೇತುಕಮಪ್ಪ ಖೇದಮನಿದಲ್ತು ಕೃಪಾವತಿಯರ್ಗೆ
ಚೇಷ್ಟಿತಂ ೩–೬೫

ಮೇಲೆ ಉದಹರಿಸಿರುವ ಸಂಸ್ಕೃತ ಶ್ಲೋಕ ಮತ್ತು ಅದರ ಅನುವಾದ ರೂಪ ಕನ್ನಡ ಪದ್ಯಗಳನ್ನು ಗಮನಿಸಿದರೆ ಅಗ್ಗಳದೇವನು ಚಂದ್ರಪ್ರಭ ಚರಿತೆಯ ಶ್ಲೋಕಗಳನ್ನು ಕ್ರಮವಾಗಿ ತರ್ಜುಮೆ ಮಾಡಿರುವ ಅಂಶ ಸ್ಪಷ್ಟಪಡುತ್ತದೆ. ಸಮಗ್ರ ಕೃತಿಯಲ್ಲೂ ಇದೇ ರೀತಿ ಇನ್ನೂ ಅನೇಕ ಸಂಸ್ಕೃತ ಶ್ಲೋಕಗಳ ಅನುವಾದ ರೂಪ ಪದ್ಯಗಳನ್ನು ಗುರ್ತಿಸಬಹುದಾಗಿದೆ.

ಅಗ್ಗಳನ ಕಾಲಕ್ಕೆ ಕನ್ನಡದಲ್ಲಿ ಕಾವ್ಯವನ್ನು ರಚಿಸಿದ್ದರೂ ಸಂಸ್ಕೃತ ಪದಗಳ ಬಳಕೆ ಅಧಿಕವಾಗಿದ್ದರೆ ಕಾವ್ಯ ಪ್ರೌಢವಾಗಿರುತ್ತದೆ ಮತ್ತು ಕವಿಗೆ ಪ್ರಾಶಸ್ತ್ಯ ಬರುತ್ತದೆ ಎಂಬ ಭಾವನೆ ಕವಿಗಳಿಗೆ ಇದ್ದಿರಬಹುದು. ಅದಕ್ಕಾಗಿಯೇ ಕಾವ್ಯ ಮಧ್ಯದಲ್ಲಿ ಸಂಸ್ಕೃತ ಶ್ಲೋಕಗಳನ್ನೇ ರಚಿಸಿ ಸೇರಿಸಿರುವ ಅಗ್ಗಳ ಸಂಸ್ಕೃತ ಪದಗಳಿಂದಲೇ ಕನ್ನಡ ಪದ್ಯವನ್ನೂ ರಚಿಸಿರುವುದನ್ನು ಈ ಕೆಳಗೆ ಕೊಟ್ಟಿರುವ ಒಂದೆರಡು ಉದಾಹರಣೆಗಳಲ್ಲಿ ಕಾಣಬಹುದು.

ಅಭ್ರಂಕಷ ಹರ್ಮ್ಯಾಗ್ರ ತ
ಳಭ್ರಾಜಿತ ಮತ್ತದಾರಣಸ್ಥಿತ ಕಾಂತಾ
ವಿಭ್ರಮ ನಿರೀಕ್ಷಣೋಪಗ
ತ ಭ್ರಮದಿಂದಮರ ಸಮಿತಿಗಾಯ್ತುನಿಮೇಷಂ ೧–೧೨೭

ನವಮಲ್ಲೀಜಾಲ ಮೋಹಾಕುಳ ಮಧುಕರ ಲೇಲಿಹ್ಯ
ಮಾನೋರ್ಧ್ವ ಮುಕ್ತಾ
ನಿವಹಂ ಕೃಷ್ಣಾಹಿಶಂಕಾತುರ ಗೃಹ ಶಿಖಾ ಚುಂಬ್ಯಮಾನೇಂದ್ರ
ಲೀಲಾಂ
ಶುವಿಶೇಷಂ ಚಂದ್ರಿಕಾ ಸಂಶಯ ಚಟುಳ ಚಕೋರೌಘ
ಪೇಪೀಯಮಾನಾ
ಗ್ರ ವಿಭಾಗಸ್ಥೇಂದು ಕಾಂತದ್ಯುತಿ ಸೊಗಯಿಸುಗುಂ
ಕಾಯಮಾನಂ ಸಮಾನಂ ೧–೧೪೫

ಅಗ್ಗಳದೇವನ ವರ್ಣನಾ ವೈಖರಿಯನ್ನು ಈ ಕೆಳಗೆ ಕೊಟ್ಟಿರುವ ಕೆಲವು ಪದ್ಯಗಳಲ್ಲಿ ಕಾಣಬಹುದು.

## ಸ್ತ್ರೀರೂಪ

ಸುೞಿಸುೞಿದಿರ್ದ ನಾಭಿವಳಿಗಳ್ ತೆರೆಗಳ್ ಜಘನಂ ಪೊದಟ್ಟು ನು
ಣ್ಪುೞಿ ಲಸೆದಿರ್ದ ಬಾಸೆ ಜಳನೀಳಿಕೆ ಕಣ್ಗಳೆ ಮೀಂಗಳಾಗೆ ಪೊಂ
ಪುೞಿಯೆನೆ ರಾಜಹಂಸನ ಮನಕ್ಕನುಕೂಲತೆಯಿಂ ಲತಾಂಗಿ ಮೆ
ಯ್ವೞಿಯೊಲವಂ ನಿಮಿರ್ಚಿದಳನಂಗ ವಿನೋದ ನದೀ
ವಿಳಾಸದಿಂ ೨–೧೬

## ಶೃಂಗಾರ

ಕಲಶಮನೆತ್ತಿ ನೀರೆಱೆವ ಕಾಂತೆಯ ತೋಳ ತೆರಳ್ಕೆ ಮೇಲುದಂ
ತೊಲಗಿಸೆ ನೋಡಿ ನುಣ್ಪೊಗರನಿಂಬ ಕುಚದ್ವಯ ಮೂಲಮಂ
ಸಮು
ಜ್ವಲ ಭುಜಮೂಲಮಂ ನೆಱೆಯೆ ಕಂಡೆರ್ದೆಯಾಱೆದೊಡಂ
ನಿರೀಕ್ಷಣಾ
ಕುಲತೆಯಿನಿಂಟುವರ್ ಪಥಿಕರಾ ಕಲಶಾಂಬುವೆ ಸೀಮೆಯೆಂಬಿನಂ
೧–೯೮

## ಮಕ್ಕಳ ಮುದ್ದುಗೆಯ್ತ

ಮಱೆಯದೆ ಬೆಚ್ಚುನೀರೆಱೆದು ತೊಟ್ಟಿಲೊಳಿಟ್ಟು ಬಸಿರ್ಗೆ
ಚೀನದೊ
ರ್ಚೆಱಗನೆ ತಂದು ಸೂನುಗೊಲವಿಂ ಸೊಡರ್ವಕ್ಕಿನ
ಬೊಟ್ಟನಿಟ್ಟು ತೂ
ಪಿಱಿದು ಪಲರ್ಮೆಯುಂ ಪರಸಿ ಸೋಗಿಲೊಳಿಟ್ಟರೆ ನಿಚ್ಚ ನಿಚ್ಚಮು
ಟ್ಕಿಱಿನೊಳೆ ಮೆಚ್ಚನಿತ್ತು ತನಿವೆರ್ಚುವ ಸೈಪೆನಗೆಂದು
ಸಾರ್ಗುವೋ ೩—೪೫

## ಮನ್ಮಥವಿಕಾರ

ನಡುನಡುಪಿತ್ತು ತನ್ನನೆನೆ ಮೆಯ್‌ಬಡವಾದುದು ಲೋಚನಾಂಶು
ಗಳ್
ಬಿಡೆ ತೊಡರ್ದಂತೆ ಗಂಡಯುಗಳಂ ಬಿಳಿದಾದುದು ತೋಳ್ಗಳೊಳ್
ಬರಂ
ಬಡೆದ ವೊಲೆಯ್ದೆ ಸುಯ್ ಸರಳವಾದುದು ಹಾವರಸ
ಪ್ರವಾಹದೊಳ್
ಗಡಣಿಸಿದಂತೆ ಬಾಷ್ಪಜಲ ಸಂತತಿ ಕಾಟ್ಪುರವಾದುದಾಕೆಯಾ
೬—೮೪

## ಮಲ್ಲಯುದ್ಧ

ಎಸೆವ ಮುಹಗ್ಗಳಂ ಠಡಕಿ ಕಕ್ಷವಡಂ ಮುಹಡಂ ಕುಳಾಡಿ ಸಂ
ದಸುವಿಡಿವಟ್ಟೆ ಸಂಗುಣವಳುಂಬಗೆ ಪಾಸಗೆವನ್ನಿಮುಟ್ಟೆ ಚ
ಟ್ಟುಸಿರಣವಟ್ಟೆ ಬಾಹುದಣೆ ಖಮ್ಮರಿ ಕತ್ತರಿ ಖೋಡವಂಕುಶಂ
ಸಸಿಕುವೆನಿಪ್ಪ ಜೆಟ್ಟಿಗನ ನೆಚ್ಚಿನ ಬಿನ್ನಣವೊಪ್ಪೆ ಕಾದಿದರ್
೫—೭೮

ಈ ಪದ್ಯದಲ್ಲಿ ಕವಿಯ 'ದೇಸಿ'ಯೂ, ಆ ಕಾಲದಲ್ಲಿ ಉಪಯೋಗದಲ್ಲಿದ್ದಿರಬಹುದಾದ ಮಲ್ಲಯುದ್ಧದ ಪರಿಭಾಷೆಯೂ ಚೆನ್ನಾಗಿ ಮೂಡಿಬಂದಿದೆ.

ಈ ಮೇಲಿನ ವರ್ಣನೆಗಳಲ್ಲಿ ಕವಿ ಎಷ್ಟು ಸಹಜವಾಗಿ ವರ್ಣಿಸಿರುತ್ತಾನೆ ಎಂಬುದು ವ್ಯಕ್ತವಾಗುತ್ತದೆ.

## ಅಗ್ಗಳನು ಬಳಸಿರುವ ಕೆಲವು ನುಡಿಗಟ್ಟುಗಳು ಮತ್ತು ಸೂಕ್ತಿಗಳು

"ಪರಿವರ್ತಿಸರಾತ್ಮಹಿತದೊಳತಿದುರ್ಮತಿಗಳ್" ೨–೩೭
"ಸರುಜಂಗೌಷಧಿ ವಿರಕ್ತಿಯಾದಂತಕ್ಕು" ೨–೩೯
"ಕೀರ್ತೀಂದುಗೆ ಸಮನಿಸದೇ ದುರ್ಯಶೋರಾಹುರೋಧಂ" ೨–೫೦
"ಸತ್ಪುರುಷರದೇಕೆ ಬಂಜೆವಡಿಪರ್ ಗಡ ದುರ್ಲಭ ಕಾಲ ಲಬ್ಧಿಯಂ" ೨–೫೭
"ಪಿತೃವಿಯೋಗವೇಂ ದುಸ್ತರವೋ" ೨–೬೦
"ಗುಣಾಂತರಮಱಿವರದೆಂತು ನೆಗಱ್ಗೊಡಂ ಲೇಸಲ್ತೇ" ೨–೫೯
ಗಗನ ಗಹನ ಸದ್ಯುಕ್ತಿಯುವ್ಯಕ್ತಮಲ್ತೇ" ೧–೬೪
"ಬಿದಿ ಕೈವಾರಿಸಿದೊಡೆ ತೀರದಿರ್ಪುದಾವುದುಮುಂಟೇ" ೩–೬೭
"ಹಸ್ತತಲಾಮಲಕಂ ಬೊಲೆಯ್ದೆ ವಿಸ್ಪಷ್ಟಂ" ೩–೬೮
"ವಿನಯೇನ ವಿನಾ ಕಾ ಶ್ರೀಃ" ೪–೧೧
"ರಾಗಾಂಧತೆಯಿಂ ಗತಿಗಿಡುವರೇಂ ವಿಚಿತ್ರಮೋ ಕರ್ಮಂ" ೪–೫೨
"ದುರ್ಬುಧನಾರೊಳೊಂದಿ ಪಡೆಯಂ ನೋವಂ" ೧–೪೨
"ಕಂಡಂ ಶನಿ ಕಾಣ್ಬವೊಲ್" ೫–೪
"ಮುನಿಜನದ ಮೈಮೆ ಮಱಿಯಿಸದೇನಂ" ೫–೨೩
"ಆರುಮನದಿರ್ಪದೆ ಪುತ್ರವಿಯೋಗ ವಿಕ್ಲಬಂ" ೫–೧೯
"ಒಳ್ಗುಣವೊಡರ್ಚುಗುಮಾರಮನಕ್ಕಮುಟ್ಕಿಱಿಂ" ೫–೩೦
"ಬೇಡಿದೊಡಮಾರುಮಾರ್ಗೆಗಡ ಕೊಟ್ಟಪರಾವುದಂ" ೫–೧೦೨

"ಪಿತೃಗೆ ಸುಪುತ್ರಂ ಸುಖೈಕ ಕಾರಣಮಲ್ತೇ" ೭–೩
"ಪಲರಿಂ ತೀರ್ಚುವ ಕಾರ್ಯಮದೊರ್ವರೊರ್ವರಿಂ
ತೀರ್ದಪುದೇ" ೭–೨೪
"ಭೈಷಜ್ಯಜ್ಞಾನಮೆ ಮಾಡುಗುಮೇ ವೇದನಾ ನಿಗ್ರಹವಂ"
೭–೨೬
"ಇತರರೊಳಾದಂ ಮಾಳ್ಪ ಕೃಪೆ ಖ ಪುಷ್ಪಮದಲ್ತೇ" ೮–೧೪
"ನರಂಗೆ ಲೇಸೆಂದುಮೆಂತುಮೇಂ ನಿಂದಪುದೇ" ೯–೯
"ಧನಮೆ ಜಗಕ್ಕೆ ದುಃಖಸಾಧನಮಲ್ತೇ" ೯–೧೨
"ಹೀನೋದ್ಧರಣದಿನತ್ತೊಂದುಮಲ್ತೆ ಪೇೞ್ ತಪಮುಂಟೇ"
೯–೪೧
"ಪುಣ್ಯಕ್ಕೆ ಪುರುಡಿಪುದು ಗಾಂಪಲ್ತೇ" ೯–೧೧೦
"ಕೋನಾಮರ್ಥಾರ್ಥೀ ನ ಮನೇನ ತು ಪರಿತುಷ್ಟಃ" ೯–೧೨೦
"ಅಪ್ರತಿಷಿದ್ಧಮನುಮತಂ ಭವತಿ" ೯–೧೨೩, ೧೩–೩೨
"ಪುಷ್ಪೈರಪಿ ನ ಯೋದ್ಧವ್ಯಂ" ೯–೧೨೪ ಗದ್ಯ
"ಸಾವಂಗೆ ಸಂಗಡಮೇಕೆ" ೧೦–೯೯ ಗದ್ಯ
"ಶುಚಿಗಳಾರೋ ಕಾರ್ಯೋತ್ಕಂಠರ್" ೧೨–೫೪
"ಆವೊಂ ಪೂಜಿಸಂ ಪೂಜ್ಯರಂ" ೧೨–೧೬೮
"ಆನಂದಸೀಮಾ ಖಲು ನೃತ್ಯಸೇವಾ" ೧೨–೧೭೪ ಗದ್ಯ
"ನ ಭೂತೋ ನ ಭವಿಷ್ಯತಿ" ೧೨–೧೮೪
"ಯಥಾ ರಾಜಾ ತಥಾ ಪ್ರಜಾಃ" ೧೩–೫೨
"ರಾಗಿ ಜನದ ಗತಿ ವಿಪರೀತಂ" ೧೩–೭೮
"ಪುೞು ನೆಯ್ದ ನೆಯ್ಗೆಯೊಳ್ ಬಲವೞಿದು ನೊೞಂ
ಸಿಲ್ಕುಗುಂ ಗಜಂ ಸಿಲ್ಕುಗುಮೇ" ೧೩–೮೩

"ಅತಿಬಲಗರಿದುಂಟೇ" ೧೪–೬೧
"ಪ್ರಸೀದಂತಿ ಜನಮನಾಂಸಿ ದೇವ ಪ್ರಾಸಾದಾಃ" ೧೫–೨೨ ಗದ್ಯ

**ಅಲಂಕಾರ**

ಅಗ್ಗಳದೇವನ ಕೃತಿಯಲ್ಲಿ ಅಲಂಕಾರಗಳಿಗೆ ಕೊರತೆ ಏನಿಲ್ಲ. ಉಪಮಾ, ಉತ್ಪ್ರೇಕ್ಷೆ, ರೂಪಕ, ಅತಿಶಯೋಕ್ತಿ, ಸ್ವಭಾವೋಕ್ತಿ, ಅರ್ಥಾಂತರನ್ಯಾಸ, ವಿರೋಧಾಭಾಸ, ಭ್ರಾಂತಿ, ಏಕಾವಳೀ, ಶ್ಲೇಷ, ಶ್ಲೇಷೋಪಮಾ, ಯಥಾ ಸಂಖ್ಯೋಪಮಾ, ಸಂದೇಹ ಇವೇ ಮೊದಲಾದ ಅಲಂಕಾರಗಳು ಈತನ ಕಾವ್ಯಗಳಲ್ಲಿ ಕಂಡುಬರುತ್ತವೆ. ಕೆಲವು ಅಲಂಕಾರಗಳಿಗೆ ಉದಾಹರಣೆಗಳನ್ನು ಈ ಕೆಳಗೆ ಸಂಗ್ರಹಿಸಿ ಕೊಟ್ಟಿದೆ.

**ಉಪಮಾ**

ಪೊಗಟ್ಟಿಬಗೆಯುಳ್ಳೊಡಂ ನಾ
ಲಗೆ ಪೊಡರದು ಖಳರ್ಗೆ ಮದವಿಶೇಷದಿನುಸಿರಲ್
ಬಗೆವೊಡಮಕಾಲದೆಸಕದಿ
ನಗಲದವೊಲ್ ಪರಭೃತಕ್ಕೆ ಮೂಕೀಭಾವಂ ೧–೪೧

**ಶ್ಲೇಷೆ**

ಅಗಜಾನವರತ ಶೋಭಾ
ಧಿಗತಂ ಭೃತ ಕಾಲಕಂಠಮುರುಶಿಖಿನಯನಂ
ನಗರೋಪವನಂ ಭವನಂ
ನಗುವುದು ರಕ್ಷೀಕೃತ ಸ್ಮರಂ ಸವಿಶಾಖಂ ೧–೧೫

**ರೂಪಕ**

ನಾರೀನಯನೋತ್ಪಲ ಪ್ರ
ನ್ನೀರೇಜಮನೊಡನಲರ್ಚೆ ಶಶಿಸೂರ್ಯಸಮಾ

ಹಾರದಿನಾದ ವೊಲತುಳಾ
ಕಾಶಂ ಸೌಭಾಗ್ಯಸಾರಮಪ್ಪಾಯ್ತುಗ್ಗಳನಾ ೧–೫೬

## ಉತ್ಪ್ರೇಕ್ಷೆ

ಬೇರಿಂ ಪೀರ್ದುಂ ತಣಿಯದೆ
ನೀರಜ ಗಂಧಾನುಬಂಧ ಜಳಮಂ ಕೊಂಬಿಂ
ಪೀರಲ್ಕೊಡರಿಸಿದಪುದೆನೆ
ತೀರದ್ರುಮ ವಿತತಿಯೆಱಗಿ ತುಱುಗಿದುದವಱೊಳ್
೧–೮೪

## ವಿರೋಧಾಭಾಸ

ಧೃತ ಶೈತ್ಯಂ ಧಾರಾಜಲ
ಯುತ ಮನುಕಂಪಾನ್ವಿತಂ ದಲೆನಿಸಿಯುಮಂತಾ
ಕ್ಷಿತಿಪತಿಯ ವಿಜಯಭುಜದಸಿ
ಲತೆ ರಿಪುನೃಪರ್ಗೀವುದಧಿಕ ತಾಪೋದಯಮಂ ೨–೩

ಕಾಲ ಬದಲಾದಂತೆಲ್ಲ ಕಥಾ ನಿರೂಪಣೆ ಮತ್ತು ವರ್ಣನೆಗಳಲ್ಲಿ ವೈವಿಧ್ಯತೆ ಕಂಡುಬರುತ್ತದೆ. ಕವಿ, ತನ್ನ ಕಾಲದ ಓದುಗರಿಗೆ ಮೆಚ್ಚಿಗೆಯಾಗುವಂತೆ ಕಾವ್ಯವನ್ನು ರಚಿಸಿ ಪ್ರಸಿದ್ಧಿ ಪಡೆಯುತ್ತಾನೆ. ಅದೇ ಕಾವ್ಯ ಮುಂದಿನ ಪೀಳಿಗೆಯವರಿಂದಲೂ ಮೆಚ್ಚಿಗೆ ಪಡೆಯಬಹುದು. ಕೆಲವರಿಗೆ ಅದು ಹಳೆಯ ಸಂಪ್ರದಾಯ ಬದ್ಧವಾದಂತೆ ಕಂಡುಬರಬಹುದು. ಸಂಪ್ರದಾಯವೂ ಕಾಲ ಬದಲಾದಂತೆಲ್ಲ ಬದಲಾಗುತ್ತದೆ. ಈ ದೃಷ್ಟಿಯಿಂದ ಇತ್ತೀಚಿನ ವಿಮರ್ಶಕರಿಗೆ ಹಳೆಯ ಕಾವ್ಯಗಳು ಸಂಪ್ರದಾಯಬದ್ಧವಾದಂತೆ ಗೋಚರವಾಗುತ್ತವೆ. ಇಷ್ಟರಿಂದ ಕವಿಯ ಅಂತಸ್ತನ್ನು ಕೆಳಗಿಳಿಸುವುದು ಸಾಧ್ಯವಿಲ್ಲ. ಅಗ್ಗಳದೇವನ ಚಂದ್ರಪ್ರಭ ಪುರಾಣವು ಪ್ರೌಢಕಾವ್ಯವೇ ಆದರೂ, ಕವಿ ವರ್ಣನಾ ಚತುರನಾಗಿದ್ದರೂ ಮೇಲಂತಸ್ತಿಗೆ ಕಾವ್ಯವನ್ನೊಯ್ಯಲು ಕೆಲವು ವಿಮರ್ಶಕರು ಒಪ್ಪು

ವುದಿಲ್ಲ. ಕವಿ ಕಾಲದವನೇ ಆಗಿ ವಿಮರ್ಶಕ, ಕಾವ್ಯ ವಿಮರ್ಶೆ ಮಾಡಿದಾಗ ಇದೊಂದು ಅತ್ಯುತ್ತಮ ಕಾವ್ಯವೆಂದು ಹೇಳಿಯೇ ಹೇಳುತ್ತಾನೆ. ವಿಮರ್ಶಕನ ದೃಷ್ಟಿ ಏನೇ ಆಗಿರಲಿ

"ಕಿವಿಯಂ ಜಕ್ಕುಲಿಪಂತೆ ನುಣ್ಪಡರ್ದ ಶಬ್ದಂ ಶಬ್ದ ಸಂದರ್ಭದೊಳ್
ಸವಿಯಂ ಮುಂದಿಡುವರ್ಥಮರ್ಥದೊಳೊಡಂಬಟ್ಟೊಳ್ಪ ನೋರಂತೆಬೀ
ಱುವ ಭಾವಂ ಸಲೆ ಭಾವದಿಂದೊದವಿ ಚಿತ್ತಂ ಕೂಡೆ ತೇಂಕಾಡೆ ಪೊ
ಣ್ಮುವ ನಾನಾರಸಮಿರ್ಪ ವಸ್ತುಕೃತಿಯಂ ಪೇಳ್ದಗ್ಗಳಂ ಮೆಚ್ಚಿಪಂ"

ಎಂದು ಕವಿಯೇ ತಿಳಿಸಿರುವಂತೆ ನಾನಾ ರಸ-ಭಾವಗಳಿಂದ ಕೂಡಿದ ಈ ಚಂದ್ರಪ್ರಭ ಪುರಾಣವನ್ನು ಅಗ್ಗಳದೇವನು ರಚಿಸಿ ಎಲ್ಲರ ಮೆಚ್ಚಿಗೆಗೆ ಪಾತ್ರನಾಗಿದ್ದಾನೆ.

# ಕೆಲವು ಸಾಹಿತ್ಯ ಕೃತಿಗಳು

## ಬೆಲೆ : ೨೫ ಪೈಸೆಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ. ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ. ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ. ಹಿರಣ್ಮಯ

೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ. ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ. ಟಿ. ಜಿ. ಸಿದ್ದಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ. ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ. ಟಿ. ಜಿ. ಸಿದ್ದಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
೩೪. ಜನ್ನ—ಡಾ. ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ. ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ. ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀ ಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ. ಹಿರಣ್ಮಯಿ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ. ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ
೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ